# ಕೆಲವು ಕನ್ನಡ ಕವಿಗಳ ಜೀವನಕಾಲ ವಿಚಾರ

## ಆಕ್ಷೇಪಗಳಿಗೆ ಪ್ರತ್ಯುಕ್ತಿ



ಈಗ ಹೊಸದಾಗಿ ಪ್ರಕಟಿತವಾದ ಕರ್ಣಾಟಕ ಕವಿಚರಿತೆಯ ಮೂರನೇ ಸಂಪುಟದಲ್ಲಿ ಮ॥ ಆಚಾರ್ಯರು ನನ್ನ "ಕೆಲವು ಕನ್ನಡ ಕವಿಗಳ ಜೀವನಕಾಲ ವಿಚಾರ"ದಲ್ಲಿ ನಾನು ನಾಗಚಂದ್ರ, ರುದ್ರಭಟ್ಟ, ಸೋಮರಾಜ ಮೊದಲಾದವರಿಗೆ ಹೇಳಿರುವ ಕಾಲವು ಸರಿಯಾದುದಲ್ಲ ವೆಂದು ಹೇಳಿ, ನನ್ನ ಅಭಿಪ್ರಾಯಕ್ಕೆ ಆಧಾರಭೂತವೆಂದು ನಾನು ಕೊಟ್ಟಿರುವ ಕಾರಣಗಳನ್ನು ದೂಷಿಸಿ, ಉಕ್ತ ಗ್ರಂಥದ ೧, ೨ ನೇ ಸಂಪುಟ ಗಳಲ್ಲಿ ತಾವು ಆ ಕವಿಗಳಿಗೆ ಹೇಳಿರುವ ಕಾಲವೇ ಸರಿಯಾದುದೆಂದು ಕನ್ನಡ ಅವತರಣಿಕೆಯ XXIX–LXXX ಪುಟಗಳಲ್ಲಿ ಬರೆದಿರುತ್ತಾರೆ. ಈ ಪುಟಗಳನ್ನು ಓದಿದಮೇಲೆಯೂ ಕೂಡ ಉಕ್ತ ಕವಿಗಳಿಗೆ ನಾನು ಹೇಳಿರುವ ಕಾಲವೇ ಸರಿಯೆಂದೂ, ಮ॥ ಆಚಾರ್ಯರು ಹೇಳಿರುವ ಕಾಲವು ತಪ್ಪಾದುದೆಂದೂ ನನಗೆ ತೋರುವುದರಿಂದ ಅವರು ನನ್ನ ಲೇಖ ನದ ಮೇಲೆ ಮಾಡಿರುವ ಆಕ್ಷೇಪಣಗಳ ಮತ್ತು ಅವರ ಸಮಾಧಾನಗಳ ವಿಚಾರವಾಗಿ ನಾನು ಇಲ್ಲಿ ಕೆಲವು ಪಂಕ್ತಿಗಳನ್ನು ಬರೆಯುತ್ತೇನೆ. ಸ್ಥಲ ಸಂಕೋಚದ ನಿಮಿತ್ತವಾಗಿ ನಾನು ಈ ಸಂದರ್ಭದಲ್ಲಿ ಮ॥ ಆಚಾ ರ್ಯರ ಆಕ್ಷೇಪ ಸಮಾಧಾನಗಳನ್ನು ಇಲ್ಲಿ ಉದ್ಧರಿಸಿ ಬರೆಯುವುದಿಲ್ಲ ವಾದ್ದರಿಂದ, ಈ ಪಂಕ್ತಿಗಳನ್ನು ಓದುವಾಗ ವಾಚಕರು ಆ ಅವತರಣಿಕೆ ಯಲ್ಲಿನ ಪುಟಗಳನ್ನೂ ಓದಿಕೊಳ್ಳಬೇಕೆಂದು ನಾನು ಪ್ರಾರ್ಥಿಸುತ್ತೇನೆ.

---

# ನಾ ಗ ಚಂ ದ್ರ

''ಮಾರ್ಗದ್ವಯ ಪರಿಣತ ಕವಿ।
ಮಾರ್ಗಮನೋಹಾರಿಯಾದುದೆಂದಖಿಳ ಬುಧರ್ ॥
ನಿರ್ಗರ್ವರಾಗಿ ಪಂಪನ।
ಗೀರ್ಗುಂಫದ ಪೆಂಪನಾಗಳುಂ ಬಣ್ಣಿಸುವರ್ ॥''

ಎಂಬ ಪಂಚತಂತ್ರ ಪದ್ಯದಲ್ಲಿ 'ದುರ್ಗಸಿಂಹನಿಂದ ಸ್ತುತನಾದ ಪಂಪನು ಆದಿಪಂಪನೇ ಹೊರತು ಅಭಿನವಪಂಪನಲ್ಲ' ಎಂಬ ಮ॥ ಆಚಾರ್ಯರ ಅಭಿಪ್ರಾಯವು (ಪುಟ XLI) ಧ್ರುವ ಮೂಲವಾದುದು. ಆದಿಪಂಪನು ತನ್ನ ಕಾವ್ಯದ ವಿಷಯವಾಗಿ—

ವಿದಿತಂ ಪ್ರಾತೀತಿಕಂ ಕೋಮಳಮತಿಸುಭಗಂ ಸುಂದರಂ ಸೂಕ್ತಿಗರ್ಭಂ।
ಮೃದುಸಂದರ್ಭಂ ವಿಚಾರಕ್ಷಮಮುಚಿತಪದಂ ಶ್ರವ್ಯನವ್ಯಾಕುಲಂ ವ್ಯಾ।
ಪ್ತದಿಗಂತಂ ಕಾವ್ಯಮೆಂದನ್ವಿತ ಸುಕವಿಜನಂ ಮೆಚ್ಚಿ ನಿಚ್ಚಂ ಮನಂಗೊ।
ಳ್ವುದರಿಂದಂ ನೆಟ್ಟನೀತಂ ಸುಕವಿಜನ ಮನೋಮಾನಸೋತ್ತಂಸಹಂಸಂ ॥

ಎಂದು ಮೊದಲಾಗಿ ಹೇಳಿಕೊಂಡಿರುವನೇ ಹೊರತು (ಕವಿಚರಿತೆ, ೧, ೩೨ನ್ನು ನೋಡಿ[1]) ಅವನಾಗಲಿ ಅವನನ್ನು ಹೊಗಳುವ ಇತರ ಕವಿಗಳಾಗಲಿ ಯಾರೂ ಅವನ ಕಾವ್ಯವು ಕರ್ಣಾಟಕ ಕಾವ್ಯ ಸರಣಿ ಸಂಸ್ಕೃತ ಕಾವ್ಯ ಸರಣಿಗಳೆರಡನ್ನೂ ತಿಳಿದ ಪಂಡಿತರ ಮನಸ್ಸಿಗೆ ರಂಜಕವಾಗಿತ್ತೆಂದು ಹೇಳಿಲ್ಲ. ಅಭಿನವಪಂಪನಾದರೆ ತನ್ನ ರಾಮಾಯಣದ ವಿಷಯದಲ್ಲಿ ಅದು ಸಂಸ್ಕೃತ ಕರ್ಣಾಟಕ ಕಾವ್ಯಗಳನ್ನು ತಿಳಿದ ವಿದ್ವಾಂಸರಿಗೆ ಹೃದ್ಯವಾಗಿತ್ತೆಂದು—

ಕೃತವಿದ್ಯರ್ ಸಮಚಿತ್ತರಾಗಿ ಪದಪಿಂದಾರಯ್ಯೆ ಕರ್ಣಾಟ ಸಂ।
ಸ್ಕೃತ ಕಾವ್ಯಂಗಳೊಳರ್ಥದಿಂ ರಚನೆಯಿಂ ನೇರ್ಪಟ್ಟ ವಿದ್ವಚ್ಛ್ರಮತ್।
ಕೃತಿಯುಪ್ಪಂತಿರೆ ನಾಗಚಂದ್ರವಿಬುಧಂ ಪೇಳ್ದಿಂದದಿಂದಾದ್ಯರ।
ದ್ಯತನರ್ ಪೇಳ್ದಭಿರಾಮ ರಾಮ ಕಥೆಯೇಂ ಸಯ್ಪಿಂಗಡಪ್ಪಕ್ಕುಮೇ ॥

---

1. ಈ ಲೇಖನದಲ್ಲಿ ಹೇಳಲ್ಪಡುವ ಪುಟ ಸಂಖ್ಯೆಗಳು ಕವಿಚರಿತೆ, ೧ ನೇ ಸಂಚಿಕೆಯ ಎರಡನೇ ಮುದ್ರಣಕ್ಕೂ, ''ಶ್ರವಣಬೆಳ್ಗೊಳದ ಶಾಸನ''ಗಳ ಎರಡನೇ ಮುದ್ರಣಕ್ಕೂ ಅನ್ವಯಿಸುವುವೆಂದು ವಾಚಕರು ತಿಳಿಯತಕ್ಕದ್ದು.

ಎಂಬ ಪದ್ಯದಲ್ಲಿ ಹೇಳಿಕೊಂಡಿದ್ದಾನೆ. 'ಮಾರ್ಗದ್ವಯ ಪರಿಣತ....' ಎಂಬ ಪಂಚತಂತ್ರ ಪದ್ಯವು ಈ ಮೇಲೆ ಹೇಳಿದ ಪದ್ಯದ ಪ್ರಥಮಾರ್ಧದ ಅರ್ಥವನ್ನೇ ಪ್ರಕಾರಾಂತರವಾಗಿ ಹೇಳುವುದರಿಂದ, ದುರ್ಗಸಿಂಹನು ಆ ಪದ್ಯವನ್ನು ನೋಡಿಯೇ ತನ್ನ ಪದ್ಯವನ್ನು ಬರೆದನೆಂಬುದರಲ್ಲಿಯೂ ಮತ್ತು ಆ ಪದ್ಯದಲ್ಲಿ ಸ್ತುತನಾದ ಪಂಪನು ಅಭಿನವಪಂಪನೇ ಎಂಬುದ ರಲ್ಲಿಯೂ ಯಾವ ಸಂದೇಹವೂ ಇಲ್ಲ.

೧. ಕ್ರಿ. ಶ. ಸುಮಾರು ೧೦೨೪*ರಲ್ಲಿ ಬರೆಯಲ್ಪಟ್ಟ ಪಂಚತಂತ್ರದ ಆದಿಯಲ್ಲಿ ಕನ್ನಡ ಕವಿಗಳನ್ನು ಸ್ತುತಿಸುವಾಗ ದುರ್ಗಸಿಂಹನು ರನ್ನ ನನ್ನು ಸ್ತುತಿಸದಿರುವುದಕ್ಕೆ ರನ್ನನು ಅವನ ಕಾಲಕ್ಕೆ ಬಹಳ ಆಧುನಿಕ ನಾಗಿದ್ದುದೇ ಕಾರಣವಾಗಿರಬೇಕೆಂದೂ, ಕ್ರಿ. ಶ. ೯೯೩ರಲ್ಲಿ ಬರೆಯಲ್ಪಟ್ಟ ರನ್ನನ ಅಜಿತನಾಥ ಪುರಾಣವನ್ನು ನಾಗಚಂದ್ರನು 'ಕೃತಿರತ್ನ'ವೆಂದು ಹೊಗಳಿರುವುದರಿಂದ ಅವನು ಆ ಗ್ರಂಥವು ಹುಟ್ಟಿ ಕನಿಷ್ಠಪಕ್ಷ ಅರ್ಧ ಶತಮಾನವಾದ ಮೇಲೆ ಇದ್ದಿರಬೇಕೆಂದೂ ಮ॥ ಆಚಾರ್ಯರು ಹೇಳಿರು ವುದು (ಪುಟ XLI) ಸಂಗತವಾಗಿಲ್ಲ[2]. ಕ್ರಿ. ಶ. ೧೨೦೯*ರಲ್ಲಿ ಯಶೋ ಧರ ಚರಿತವನ್ನೂ, ಕ್ರಿ. ಶ. ೧೨೩೦*ರಲ್ಲಿ ಅನಂತನಾಥ ಪುರಾಣವನ್ನೂ ಬರೆದ ಜನ್ನಕವಿಯನ್ನು ಕ್ರಿ. ಶ. ಸುಮಾರು ೧೨೩೫*ರಲ್ಲಿದ್ದ ಆಂಡ ಯ್ಯನೂ, ಕಮಲಭವನೂ ಸ್ತುತಿಸಿರುವರು. ಕ್ರಿ. ಶ. ೧೧೮೯*ರಲ್ಲಿ ಚಂದ್ರಪ್ರಭ ಪುರಾಣವನ್ನು ಬರೆದ ಅಗ್ಗಳನನ್ನು ಕ್ರಿ. ಶ. ಸುಮಾರು ೧೧೯೫*ರಲ್ಲಿದ್ದ ಆಚಣ್ಣನೂ, ಕ್ರಿ. ಶ. ಸುಮಾರು ೧೨೦೦*ರಲ್ಲಿದ್ದ ದೇವ ಕವಿಯೂ ಹೊಗಳಿರುವರಲ್ಲದೆ ಈ ಆಚಣ್ಣನು ಕ್ರಿ. ಶ. ಸುಮಾರು ೧೧೮೦*ರಲ್ಲಿದ್ದ ಬೊಪ್ಪಣಪಂಡಿತ ಅಥವಾ ಸುಜನೋತ್ತಂಸನನ್ನೂ ಹೊಗಳಿರುತ್ತಾನೆ. ಮ॥ ಆಚಾರ್ಯರು ಮೇಲೆ ವಿಧಿಸಿರುವ ನಿಯಮ

---

* ಈ ಗುರುತಿರುವ ವರ್ಷ ಸಂಖ್ಯೆಗಳು ಮ॥ ಆಚಾರ್ಯರಿಂದ ಹೇಳಲ್ಪಟ್ಟವುಗಳೆಂದು ತಿಳಿಯಬೇಕು.

2. ಅಜಿತನಾಥಪುರಾಣದ ಕರ್ತೃವಾದ ರನ್ನನೇ ಆ ಕಾವ್ಯಕ್ಕೆ 'ಕಾವ್ಯರತ್ನ', 'ಪುರಾಣ ತಿಲಕ' ಎಂಬ ಹೆಸರುಗಳನ್ನು ಇಟ್ಟಿರುವುದರಿಂದ (ಕವಿಚರಿತೆ I, ೬೫ನ್ನು ನೋಡಿ) ಆ ಕಾವ್ಯಕ್ಕೆ 'ಕೃತಿರತ್ನ' ಎಂಬ ಪ್ರಥೆಯುಂಟಾಗುವುದಕ್ಕೆ ಕನಿಷ್ಠಪಕ್ಷ ಅರ್ಧ ಶತಮಾನವಾಗಲಿ ಅಂತತಃ ಐದು ವರ್ಷಗಳಾಗಲಿ ಬೇಕಾಗಿಲ್ಲ.

ಕ್ಕನುಸಾರವಾಗಿ ಆಂಡಯ್ಯನು ಕನಿಷ್ಠಪಕ್ಷ ಕ್ರಿ. ಶ. ೧೨೫೯ರಲ್ಲಿಯೂ, ಆಚಣ್ಣನು ಕನಿಷ್ಠಪಕ್ಷ ಕ್ರಿ. ಶ. ಸುಮಾರು ೧೨೩೯ರಲ್ಲಿಯೂ ಇದ್ದಿರಬೇಕೇ ಹೊರತು ೧೨೫೯ ಮತ್ತು ೧೨೩೯ಕ್ಕಿಂತ ಹಿಂದೆ ಈ ಕವಿಗಳು ಇದ್ದಿರಕೂಡದು!

ವಸ್ತುತಃ, ಕ್ರಿ. ಶ. ೧೧೮೯ರಲ್ಲಿದ್ದ ಅಗ್ಗಳನನ್ನು ಕ್ರಿ. ಶ. ೧೧೯೫ ರಲ್ಲಿದ್ದ ಆಚಣ್ಣನು ಹೊಗಳಿರುವುದರಿಂದ ಕ್ರಿ. ಶ. ೯೯೩ರಲ್ಲಿ ಬರೆಯಲ್ಪಟ್ಟ ಅಜಿತಪುರಾಣವನ್ನು ಹೊಗಳುವ ನಾಗಚಂದ್ರನು ಕ್ರಿ. ಶ. ೯೯೯ರಲ್ಲಿದ್ದ ನೆಂದು ಹೇಳುವುದರಲ್ಲಿ ಯಾವ ಬಾಧಕವೂ ಇಲ್ಲವೆಂಬುದು ಸ್ಪಷ್ಟ.

ದುರ್ಗಸಿಂಹನು ರನ್ನನನ್ನು ಸ್ತುತಿಸದಿರುವುದಕ್ಕೆ ಕಾರಣ ವೇನೆಂದರೆ, ಅವನಿಗೆ ಇಷ್ಟವಿಲ್ಲದುದೇ. ಪ್ರತಿ ಒಬ್ಬ ಕವಿಯೂ ತನ್ನ ಹಿಂದಿನ ಕವಿಗಳಲ್ಲಿ ತನಗೆ ಇಷ್ಟಬಂದವರನ್ನು ಮಾತ್ರ ಸ್ತುತಿಸುವನೇ ಹೊರತು ಹಿಂದೆ ಇದ್ದವರಲ್ಲಿ ಎಲ್ಲರನ್ನೂ ಅಥವಾ ಕೆಲವರನ್ನೂ ಕವಿಯು ಸ್ತುತಿಸಬೇಕೆಂಬ ಕ್ಲ್ಪಪ್ತಿಯೇನೂ ಇಲ್ಲ. ಆದ್ದರಿಂದಲೇ ಕ್ರಿ. ಶ. ೧೧೦೦ ರಲ್ಲಿದ್ದನೆಂದು ಮ॥ ಆಚಾರ್ಯರು ಹೇಳುವ ನಾಗಚಂದ್ರನು ಕ್ರಿ. ಶ. ಸುಮಾರು ೯೯೦ರಲ್ಲಿ ಇದ್ದನೆಂದು ಅವರು ಹೇಳುವ ಒಂದನೆಯ ನಾಗ ವರ್ಮನನ್ನೂ, ಕ್ರಿ. ಶ. ೧೦೦೦ದಲ್ಲಿದ್ದರೆಂದು ಹೇಳುವ ಗಜಾಂಕುಶ ಮನಸಿಜ ಚಂದ್ರಭಟ್ಟರನ್ನೂ ಸ್ತುತಿಸದೆ, ಪಂಪ ಪೊನ್ನ ರನ್ನರನ್ನು ಮಾತ್ರ ಸ್ತುತಿಸಿರುವನು. ನೇಮಿಚಂದ್ರನೂ ಕೂಡ ಆದ್ದರಿಂದಲೇ ತನ್ನ ಹಿಂದೆ ಇದ್ದ ಕನ್ನಡ ಕವಿಗಳಲ್ಲಿ ಯಾರನ್ನೂ ಸ್ತುತಿಸದೆ ತನ್ನ ಗ್ರಂಥ (ಲೀಲಾವತಿ, ಮತ್ತು ನೇಮಿನಾಥಪುರಾಣ)ಗಳನ್ನು ಬರೆದಿದ್ದಾನೆ.

೨. " ಅದ್ಯತನನಾಗಿಯುಂ ನೆಗ | ೞ್ದಾದ್ಯರ ದೊರೆಯೆನಿಸಿ ಮೆೞ್ದಿದು ಸಾಹಿತ್ಯಕಳಾ |
ಹೃದ್ಯತೆಯಿನೇದನಾನಿರ | ವದ್ಯಗುಣಂ ಸಂದ ನಾಗಚಂದ್ರ ಕವೀಂದ್ರಂ॥ "

ಎಂಬ ಪದ್ಯದಲ್ಲಿ ಕರ್ಣಪಾರ್ಯನು (ಕ್ರಿ. ಶ. ಸುಮಾರು ೧೧೪೦೫) 'ಅದ್ಯತನಂ' ಎಂದು ನಾಗಚಂದ್ರನ ವಿಷಯದಲ್ಲಿ ಹೇಳಿರುವದು ನಿಜ ವಾದಾಗ್ಯೂ, ಇದರಿಂದ 'ನಾಗಚಂದ್ರನು ಕರ್ಣಪಾರ್ಯನಿಗಿಂತ ಬಹಳ ಹಿಂದೆ ಇದ್ದಿರಲಿಲ್ಲ, ಸುಮಾರು ಒಂದು ತಲೆ ಹಿಂದೆ ಇದ್ದಿರಬಹುದು'

ಎಂದು ಮ॥ ಆಚಾರ್ಯರು ಸಿದ್ಧಾಂತ ಮಾಡಿರುವುದು (ಪುಟ XLII) ತಪ್ಪು. 'ಅದ್ಯತನ' ಎಂಬ ಪದಕ್ಕೆ '**ಈಗ** ಇರುವವನು' ಎಂದು ಅರ್ಥವು. ಈ ಅರ್ಥದಲ್ಲಿ ಈ ಪದವನ್ನು ಕರ್ಣಪಾರ್ಯನು ಉಪಯೋಗಿಸಿಲ್ಲವೆಂಬುದನ್ನು ಮ॥ ಆಚಾರ್ಯರೇ ಒಪ್ಪಿಕೊಂಡಿರುತ್ತಾರೆ. ಅಲ್ಲದೆ ಈ ಪದ್ಯವು ಮೇಲೆ ಹೇಳಿದ 'ಕೃತವಿದ್ಯರ್ ಸಮುಚಿತ್ತರಾಗಿ....' ಎಂಬ ಪಂಪ ರಾಮಾಯಣ ಪದ್ಯದ ಉತ್ತರಾರ್ಧದಲ್ಲಿರುವ, 'ನಾಗಚಂದ್ರ ವಿಬುಧಂ ಪೇೞ್ದಿಂದದಿಂದಾದ್ಯರ। ದ್ಯತನರ್ ಪೇೞ್ದಭಿರಾಮ ರಾಮ ಕಥೆಯೊಳ್ ಸಯ್ಪಿಂಗಡಪ್ಪರ್ಕ್ಕುಮೇ' ಎಂಬ ವಾಕ್ಯದಿಂದ ಬೋಧಿತವಾಗುವ ಅರ್ಥವನ್ನೇ ಪ್ರಕಾರಾಂತರವಾಗಿ ಬೋಧಿಸುವುದರಿಂದ, ಕರ್ಣಪಾರ್ಯನೂ ಕೂಡ ಈ ಪದ್ಯವನ್ನು ನೋಡಿಯೇ ತನ್ನ ಪದ್ಯವನ್ನು ಗ್ರಥಿಸಿರುವನೆಂಬುದೂ, 'ಆದ್ಯ', 'ಅದ್ಯತನ' ಎಂಬ ಪದಗಳನ್ನು ನಾಗಚಂದ್ರನ ಪದ್ಯದಲ್ಲಿ ಪ್ರಯುಕ್ತವಾದ ಅರ್ಥದಲ್ಲಿಯೇ, ಎಂದರೆ, 'ಪ್ರಾಚೀನ', 'ಅರ್ವಾಚೀನ' ಎಂಬ ಅರ್ಥದಲ್ಲಿಯೇ[3] ಪ್ರಯೋಗ ಮಾಡಿರುವನೆಂಬುದೂ ಸ್ಪಷ್ಟ. ಆದ್ದರಿಂದ ನಾಗಚಂದ್ರನು ಅರ್ವಾಚೀನನೆಂದು ಕರ್ಣಪಾರ್ಯನು ಮೇಲಿನ ಪದ್ಯದಲ್ಲಿ ಹೇಳಿರುವನೇ ಹೊರತು ಅವನು ತನಗಿಂತ ಸ್ವಲ್ಪ ಹಿಂದೆ, ಎಂದರೆ ಸುಮಾರು ಒಂದು ತಲೆ ಹಿಂದೆ ಇದ್ದನೆಂದು ಹೇಳಿಲ್ಲ.

---

೩. 'ಆದ್ಯ' ಎಂದರೆ 'ಆದಿಯಲ್ಲಿ ಇದ್ದವನು' ಎಂದೂ, 'ಅದ್ಯತನ' ಎಂದರೆ 'ಈಗ ಇರುವವನು' ಎಂದೂ ಆ ಪದಗಳ ನಿಷ್ಕೃಷ್ಟವಾದ ಯೋಗಾರ್ಥ. 'ಕೃತವಿದ್ಯರ್ ಸಮುಚಿತ್ತರಾಗಿ....' ಎಂಬ ಪದ್ಯದಲ್ಲಿರುವ ಈ ಪದಗಳಿಗೆ ಈ ಅರ್ಥಗಳನ್ನು ಹೇಳಿದಲ್ಲಿ 'ಆದಿಯಲ್ಲಿದ್ದ ಮತ್ತು ಈಗಿರುವ ಕವಿಗಳಿಂದ ಬರೆಯಲ್ಪಟ್ಟ ರಾಮಕಥಾ ಸಂಬದ್ಧವಾದ ಆವ ಗ್ರಂಥವೂ ನಾಗಚಂದ್ರನ ಕಾವ್ಯದಷ್ಟು ಗುಣೋಜ್ಜ್ವಲವಾಗಿಲ್ಲ' ಎಂದು ಪದ್ಯಕ್ಕೆ ತಾತ್ಪರ್ಯವಾಗುವುದರಿಂದ, ಮಧ್ಯ ಕಾಲದಲ್ಲಿದ್ದ ಕವಿಗಳು ಬರೆದ ರಾಮಕಥಾ ಸಂಬದ್ಧವಾದ ಕಾವ್ಯಗಳು ನಾಗಚಂದ್ರನ ಕಾವ್ಯಕ್ಕಿಂತ ನಿಕೃಷ್ಟವಾಗಿದ್ದುವೋ ಇಲ್ಲವೋ ಎಂಬ ವಿಷಯದಲ್ಲಿ ಈ ಪದ್ಯದಲ್ಲಿ ಏನನ್ನೂ ಹೇಳಿಲ್ಲವೆಂದಾಗುವುದು. ನಾಗಚಂದ್ರನ ಮನಸ್ಸಿನಲ್ಲಾದರೆ ತನ್ನ ಕಾವ್ಯವು ಹಿಂದೆ ಇದ್ದ ಮತ್ತು ಈಗ ಇರುವ ಕವಿಗಳ ಎಂದರೆ, ಇತರ ಸಮಸ್ತ ಕವಿಗಳ ರಾಮಕಥಾ ಸಂಬದ್ಧವಾದ ಕಾವ್ಯಗಳನ್ನು ಮೀರಿರುವುದೆಂಬ ಅಭಿಪ್ರಾಯವಿತ್ತೆಂದು ತೋರುವುದರಿಂದ, ಅವನು ಇಲ್ಲಿ, 'ಆದ್ಯ', 'ಅದ್ಯತನ' ಎಂಬ ಪದಗಳನ್ನು, 'ಪ್ರಾಚೀನ', 'ಅರ್ವಾಚೀನ' ಎಂಬ ಅರ್ಥದಲ್ಲಿ ಉಪಯೋಗಿಸಿರುವನೆಂಬುದು ಸ್ಪಷ್ಟ.

೩. 'ಮುನಿನಾಥಂ ದಶಧರ್ಮಧಾರಿ....' ಎಂಬ ಪದ್ಯದಿಂದ ಶ್ರ. ಬೆ. ೧೨೭ ನೇ ಶಾಸನದಲ್ಲಿ ಸ್ತುತಿಸಲ್ಪಟ್ಟು ಕ್ರಿ. ಶ. ೧೧೧೫ರಲ್ಲಿ ಲೋಕಾಂತರವನ್ನೈದಿದ ಮೇಘಚಂದ್ರನಾಮಕನಾದ ಗುರುವು ಪಂಪ ರಾಮಾಯಣದಲ್ಲಿ ಇದೇ ಪದ್ಯದಿಂದ ಸ್ತುತಿಸಲ್ಪಟ್ಟಿರುವ ಮೇಘಚಂದ್ರನಿಂದ ಭಿನ್ನನು. ಅಭಿನವಪಂಪನು ದುರ್ಗಸಿಂಹನಿಂದ ಸ್ತುತನಾಗಿದ್ದು ಅವನ ರಾಮಾಯಣವು ಕ್ರಿ. ಶ. ಸುಮಾರು ೧೦೨೫*ಕ್ಕಿಂತ ಹಿಂದೆಯೇ ಬರೆಯಲ್ಪಟ್ಟಿತ್ತಾದುದರಿಂದ ಈ ಗ್ರಂಥದಲ್ಲಿ ಸ್ತುತನಾದ ಮೇಘಚಂದ್ರನು ಕ್ರಿ. ಶ. ೧೧೧೫ರವರೆಗೆ ಜೀವಿಸಿದ್ದನೆಂಬುದು ಅಸಂಭಾವನೀಯವಾಗಿರುವುದು. ಹೀಗೆಯೇ ಶ್ರ. ಬೆ. ೬೪ ನೇ ಶಾಸನದಲ್ಲಿ ಸ್ತುತಿಸಲ್ಪಟ್ಟು ಕ್ರಿ. ಶ. ೧೧೨೩ರಲ್ಲಿ ಜೀವಿಸುತ್ತಿದ್ದ ಶ್ರುತಕೀರ್ತಿಯು ರಾಘವಪಾಂಡವೀಯವೆಂಬ ಗತಪ್ರತ್ಯಾಗತ ಕಾವ್ಯದ ಕರ್ತೃವಲ್ಲವೆಂದೂ, ಆ ಕಾವ್ಯದ ಕರ್ತೃವಾಗಿಯೂ, ಪಂಪ ರಾಮಾಯಣದಲ್ಲಿ ಸ್ತುತಿಸಲ್ಪಟ್ಟೂ ಇರುವ ಶ್ರುತಕೀರ್ತಿಯಿಂದ ಅವನು ಭಿನ್ನನೆಂದೂ ನಾನು ಮೇಲೆ (ಎಂದರೆ, "ಕೆಲವು ಕನ್ನಡ ಕವಿಗಳ ಜೀವನಕಾಲ ವಿಚಾರ"ದಲ್ಲಿ) ೪೫-೪೭ ನೇ ಪುಟಗಳಲ್ಲಿ ಹೇಳಿರುವುದರಿಂದ ಸ್ಪಷ್ಟವಾಗುವುದು.

೫. XLIII ಪುಟದಲ್ಲಿ ಮ॥ ಆಚಾರ್ಯರು ಬಿಜಾಪುರದ ಮ್ಯೂಸಿಯಮ್ಮಿನಲ್ಲಿರುವ ಎ. ೨೩ ನೇ ನಂಬರಿನ ಶಾಸನದಲ್ಲಿರುವ ಕೆಲವು ಪದ್ಯಗಳು ಪಂಪ ರಾಮಾಯಣದಲ್ಲಿನ ಕೆಲವು ಪದ್ಯಗಳನ್ನು ಅತ್ಯಂತವಾಗಿ ಹೋಲುವುವೆಂಬುದನ್ನು ಸ್ಪಷ್ಟಪಡಿಸಿದ್ದಾರೆ. ಈ ಹೋಲಿಕೆಯನ್ನು ನೋಡಿದಲ್ಲಿ, ಈ ಶಾಸನವನ್ನು ಬರೆದ ಕವಿಯು ಮತ್ತು ಪಂಪ ರಾಮಾಯಣವನ್ನು ಬರೆದ ಕವಿಯು—ಇವರಿಬ್ಬರಲ್ಲಿ ಒಬ್ಬನು ಇನ್ನೊಬ್ಬನನ್ನು ಅನುಕರಿಸಿರುವನೆಂದು ಅಷ್ಟು ಮಾತ್ರ ನಾವು ಹೇಳಬಹುದೇ ಹೊರತು ಅಭಿನವಪಂಪನು ಕ್ರಿ. ಶ. ೧೧೦೦ರಲ್ಲಿ ಅಥವಾ ಕ್ರಿ. ಶ. ೧೦೨೫ರಲ್ಲಿ ಇದ್ದನೆಂದಾಗಲಿ ಇರಲಿಲ್ಲವೆಂದಾಗಲಿ ಇದರಿಂದ ನಿರ್ಣಯಿಸಲು ಸಾಧ್ಯವಲ್ಲ.

ಇನ್ನು ಕವಡಮಯ್ಯನ ದೇವಿಸೆಟ್ಟಿಯ ಗುರುವಾದ ಬಾಲಚಂದ್ರನ ವಿಷಯವಾಗಿ (ಮೇಲೆ ೪೦-೪೨ ನೇ ಪುಟಗಳನ್ನು ನೋಡಿ) ಸ್ವಲ್ಪ

ವಿಚಾರಮಾಡಬೇಕಾಗಿರುವುದು. ಕಲಸಾಪುರದ ಶಾಸನದ ೪೨-೪೪ ನೇ ಪಂಕ್ತಿಗಳಲ್ಲಿ ಸ್ತುತನಾಗಿರುವ ವಕ್ರಗಚ್ಛದ ಬಾಲಚಂದ್ರನು ಕವಡಮಯ್ಯನ ಅಣುವಂತಯ್ಯನ ಗುರುವಾಗಿದ್ದನೆಂದೂ, ಈ ಅಣುವಂತಯ್ಯನಿಂದ ನಾಲ್ಕನೆಯ[4] ತಲೆಯವನಾದ ಕವಡಮಯ್ಯನ ದೇವಿಸೆಟ್ಟಿಯ ಗುರುವೆಂದು (ಪಂಕ್ತಿ ೫೭-೫೯) ಸೂಚಿಸಲ್ಪಟ್ಟಿರುವ ಬಾಲಚಂದ್ರನಾದರೆ ವಕ್ರಗಚ್ಛದ ಬಾಲಚಂದ್ರನಿಂದ ಭಿನ್ನನೆಂದೂ ಮ|| ಆಚಾರ್ಯರು XLV, XLVI ಪುಟಗಳಲ್ಲಿ ಬರೆದಿರುತ್ತಾರೆ.

ಈ ಅಭಿಪ್ರಾಯವು ಬಹು ವಿಚಿತ್ರವಾದುದೆಂದು ನಮಗೆ ತೋರುವುದು. ವೀರಬಲ್ಲಾಳನಿಂದ ದಾನವನ್ನು ಪಡೆದನೆಂದು ೫೭-೫೯ ನೇ ಪಂಕ್ತಿಗಳಲ್ಲಿ ಹೇಳಲ್ಪಟ್ಟಿರುವ ಬಾಲಚಂದ್ರನು ವಕ್ರಗಚ್ಛದ ಬಾಲಚಂದ್ರನಿಂದ ಭಿನ್ನನಾಗಿದ್ದಲ್ಲಿ, ಈ ವಕ್ರಗಚ್ಛದ ಗುರುವನ್ನೂ ಇವನ ಗುರುಪರಮ ಗುರು, ಸಧರ್ಮಾದಿಗಳನ್ನೂ ಈ ಶಾಸನದಲ್ಲಿ (೩೬-೪೪ನೆಯ ಪಂಕ್ತಿಗಳು) ಸ್ತುತಿಸಬೇಕಾದ ಆವಶ್ಯಕತೆಯೇನಿದ್ದಿತು ? ಹೀಗೆಯೇ, ಬೇಲೂರು ೧೨೯ ನೇ ಶಾಸನದ ೧೫ ನೇ ಪಂಕ್ತಿಯಲ್ಲಿ ಸ್ತುತನಾದ ಬಾಲಚಂದ್ರನು ಆ ಶಾಸನದ ಆದಿಯಲ್ಲಿ ಸ್ತುತನಾದ ವಕ್ರಗಚ್ಛದ ಬಾಲಚಂದ್ರನಿಂದ ಭಿನ್ನನಾಗಿದ್ದಲ್ಲಿ, ಈ ವಕ್ರಗಚ್ಛದ ಗುರುವನ್ನು ಆ ಶಾಸನದ ಉಪಕ್ರಮದಲ್ಲಿ ಸ್ತುತಿಸಬೇಕಾದ ಆವಶ್ಯಕತೆಯೇನಿದ್ದಿತು ? ಈ ವಿಷಯದಲ್ಲಿ ಮ|| ಆಚಾರ್ಯರು, "ಶಾಂತಿನಾಥ ಬಸದಿಯನ್ನು ಕಟ್ಟಿಸಿದ ಕವಡಮಯ್ಯನ ದೇವಿಸೆಟ್ಟಿಗೆ . ವಕ್ರಗಚ್ಛದ ಬಾಲಚಂದ್ರನು ಕುಲಗುರುವಾಗಿದ್ದುದರಿಂದ [ಎಂದರೆ ಅವನಿಗೆ ನಾಲ್ಕು ತಲೆ ಹಿಂದೆ ಇದ್ದ ಅವನ ಪೂರ್ವಪುರುಷನಾದ ಕವಡಮಯ್ಯನ ಅಣುವಂತಯ್ಯನಿಗೆ ವಕ್ರಗಚ್ಛದ ಬಾಲಚಂದ್ರನು ಗುರುವಾಗಿದ್ದುದರಿಂದ] ಈ ಶಾಸನಗಳಲ್ಲಿ ಅವನನ್ನು ಹೊಗಳಿದೆ" ಎಂದು XLVI ಪುಟದಲ್ಲಿ ಬರೆದಿದ್ದಾರೆ.

---

4. ಕವಡಮಯ್ಯನ ಅಣುವಂತಯ್ಯನು ಕವಡಮಯ್ಯನ ದೇವಿಸೆಟ್ಟಿಗಿಂತ ನಾಲ್ಕು ತಲೆ ಹಿಂದೆ ಇದ್ದ ಪೂರ್ವಪುರುಷನು ಎಂಬ ಮ|| ಆಚಾರ್ಯರ ಹೇಳಿಕೆಯನ್ನು ನಾನು ಇಲ್ಲಿ ಅನುವದಿಸಿರುವೆನು. ಈ ಶಾಸನದಲ್ಲಿ ಅನೇಕ ಅಕ್ಷರಗಳು ಕಾಣದೇ ಇರುವುದರಿಂದ ಮ|| ಆಚಾರ್ಯರು ಮಾಡಿರುವ ಅರ್ಥವು ಸರಿಯಾಗಿದೆಯೆಂದು ನಿಷ್ಕೃಷ್ಟವಾಗಿ ಹೇಳಲಾಗುವುದಿಲ್ಲ.

ಆದರೆ, ದೇವಿಸೆಟ್ಟಿಕಾರಿತವಾದ ಶಾಂತಿನಾಥ ಜಿನಾಲಯದ ಪರಿಸೂತ್ರ ದೊಳಗೆ ತಾವು ಪ್ರತಿಷ್ಠೆಮಾಡಿದ ಮಲ್ಲಿನಾಥ ದೇವರ ಅರ್ಚನಾದಿ ಗಳಿಗಾಗಿ ಅಪ್ಪಯ್ಯ, ಗೋಪಯ್ಯ, ಮಾಚಯ್ಯ ಎಂಬ ಮೂರು ಸಹೋ ದರರು ಮಹಾಮಂಡಲಾಚಾರ್ಯರಾದ ಮಾಂಡವಿಯ ಬಾಲಚಂದ್ರ ದೇವರ ಶಿಷ್ಯ ರಾಮಚಂದ್ರಮುನಿಯಿಂದ ಒಂದು ಗ್ರಾಮವನ್ನು ಕ್ರಯಕ್ಕೆ ಪಡೆದರೆಂದು ಹೇಳುವುದೇ ಬೇಲೂರು ೧೨೯ ನೇ ಶಾಸನದ ಉದ್ದೇಶವಾಗಿರುವುದರಿಂದ ಈ ಶಾಸನದ ಆದಿಯಲ್ಲಿ ದೇವಿಸೆಟ್ಟಿಯ ಕುಲಗುರುವನ್ನು ಸ್ತುತಿಸಬೇಕಾದ ಆವಶ್ಯಕತೆಯೇನೂ ಕಂಡುಬರು ವುದಿಲ್ಲ. 'ಕುಲಗುರು'ವನ್ನು ಸ್ತುತಿಸಬೇಕೆಂಬ ಇಚ್ಛೆಯು ಶಾಸನ ಲೇಖಕನಿಗೆ ಇದ್ದಿದ್ದಲ್ಲಿ ಪ್ರಸಂಗವಶಾತ್ ಕೀರ್ತಿತನಾಗಿರುವ ದೇವಿ ಸೆಟ್ಟಿಯ ಕುಲಗುರುವಿಗಿಂತಲೂ ದತ್ತಿಯನ್ನು ಕೊಟ್ಟ ಅಪ್ಪಯ್ಯಾದಿ ಸಹೋದರರ ಕುಲಗುರುವನ್ನು ಸ್ತೋತ್ರಮಾಡುವುದು ಸಹಜವಾಗಿ ತ್ತಲ್ಲವೆ? ಇಷ್ಟರ ಮೇಲೆ ದೇವಿಸೆಟ್ಟಿಯ ಕುಲಗುರುವನ್ನು ಸ್ತೋತ್ರ ಮಾಡುವುದೇ ಸಹಜವಾಗಿತ್ತೆಂದು ನಾವು ಒಂದುವೇಳೆ ಒಪ್ಪಿಕೊಳ್ಳೋ ಣವೆಂದರೂ ಕೂಡ, ಈ ಶಾಸನವನ್ನೂ ಮತ್ತು ಮೇಲೆ ಹೇಳಿದ ಕಲಸಾ ಪುರದ ಶಾಸನವನ್ನೂ ರಚಿಸಿದ ಇಬ್ಬರು ಲೇಖಕರಿಗೂ ದೇವಿಸೆಟ್ಟಿಗೆ ಒಂದು, ಎರಡು ಮತ್ತು ಮೂರು ತಲೆ ಹಿಂದೆ ಇದ್ದ ಪೂರ್ವಪುರುಷರ ಗುರುಗಳನ್ನು ಅತಿಕ್ರಮಿಸಿ, ನಾಲ್ಕನೇ ತಲೆಯವನಾದ ಅಣುವಂತ ಯ್ಯನ ಗುರುವನ್ನೇ ಸ್ತುತಿಸಬೇಕೆಂಬ ಆವಶ್ಯಕತೆಯೇನಿದ್ದಿತು ?

ವಸ್ತುತಃ, (ಕಲಸಾಪುರದ ಶಾಸನದ ೪೨-೪೪ ನೇ ಪಂಕ್ತಿಗಳಲ್ಲಿ ಸ್ತುತನಾಗಿರುವ) ವಕ್ರಗಚ್ಛದ ಬಾಲಚಂದ್ರನು ಅಣುವಂತಯ್ಯನ ಗುರು ವಾಗಿದ್ದನೆಂಬ ಮ|| ಆಚಾರ್ಯರ ಅಭಿಪ್ರಾಯವೂ ಭ್ರಮಮೂಲ ವಾದುದೆಂದು ಈ ಶಾಸನದ ೪೪-೪೭ ನೇ ಪಂಕ್ತಿಗಳಲ್ಲಿರುವ—

(೪೪) ಶ್ರೀ ಮೂಲಸಂಘ. . . . ಪದ್ಮಾಕರರಾಜಹಂಸೋ . . . . . .
ನಿಪುಣ ಪ್ರವರಾವತಂಸಃ ಜೀಯಾ—

(೪೫) ಜ್ಜಿನೇಂದ್ರ ಸಮಯಾರ್ಣ್ಣವ ಪೂರ್ಣ್ಣಚಂದ್ರಃ. . . . . . . . . . . ಕ್ರುಧಾಃ ।
ಅಂತೆನಿಸಿದ ಶ್ರೀ. . . . ಹರಿಯಾಚಾರ್ಯರ ಗುಡ್ಡಂ ದೇದೀ—

(೪೬) ವ್ಯಜ್ಜಯಾನ್ವಯ ವಾರಿಧಿಚಂದ್ರಮನುಂ.... ಗರ್ಹಂತ್ಯ....ಚರಿತನುಂ
ವರಜೈನ ಸಮಯ ಕುಮುದೇಂದು....ಅನ್ಯಾಯಾರ್ಜಿತ ಧನಮ

(೪೭) ನೆಯ್ದಿ ಕವಡೆಮಯ್ಯನಣುವಂತಯ್ಯಂ। (?) ವರ ಸುಗುಣ ಸಮನ್ವಿತ ಕವಡೆ
ಮಯ್ಯ ತನ್ನ....ಪೂಜ್ಯಯಶಸ್ಸದ್ಗುಣಿ ಕೇತಿಸೆಟ್ಟಿಯುಮುದಾತ್ತ—

ಎಂಬ ಪದಗಳಿಂದ ಸ್ಪಷ್ಟವಾಗುವುದು. ಈ ಪಂಕ್ತಿಗಳಲ್ಲಿ ಕವಡೆಮಯ್ಯನ ಅಣುವಂತಯ್ಯನು '....ಹಳಿಯಾಚಾರ್ಯರ ಗುಡ್ಡಂ' ಎಂದು ಸ್ಪಷ್ಟವಾಗಿ ಉಲ್ಲೇಖಿಸಲ್ಪಟ್ಟಿರುವುದರಿಂದ ಅವನು ವಕ್ರಗಚ್ಛದ ಬಾಲಚಂದ್ರನ ಗುಡ್ಡನೆಂಬ ಮ॥ ಆಚಾರ್ಯರ ಅಭಿಪ್ರಾಯವು ತಪ್ಪೆಂಬುದು ಸುವ್ಯಕ್ತವಾಗಿರುವುದು. ಅಲ್ಲದೆ, ಶಾಸನದ ಉಪಕ್ರಮದಲ್ಲಿ ವಕ್ರಗಚ್ಛದ ಬಾಲಚಂದ್ರನನ್ನು ಹೊಗಳಿ, ಅಂತ್ಯದಲ್ಲಿ ಬಾಲಚಂದ್ರಮುನಿಗೆ ದಾನವನ್ನು ಕೊಡಿಸಿದನೆಂದು[5] ಹೇಳಿರುವಾಗ ಹೀಗೆ ದಾನವನ್ನು ಸ್ವೀಕರಿಸಿದ ಬಾಲಚಂದ್ರನು ಪೂರ್ವಸ್ಮೃತನಾದ ಬಾಲಚಂದ್ರನಲ್ಲವೆಂದೂ, ಅವನು ಪುಸ್ತಕಗಚ್ಛದ ಬಾಲಚಂದ್ರನೆಂದೂ ಹೇಳುವ ಮ॥ ಆಚಾರ್ಯರ ಅಭಿಪ್ರಾಯವು ಬಹು ವಿಚಿತ್ರವಾದುದಲ್ಲವೆ? ಆದ್ದರಿಂದ ಇದೆಲ್ಲವನ್ನೂ ಯೋಚಿಸಿದಲ್ಲಿ ಮ॥ ಆಚಾರ್ಯರ ಮೇಲೆಹೇಳಿದ ಅಭಿಪ್ರಾಯವು ತಪ್ಪಾದುದೆಂದೂ, ಕಲಸಾಪುರದ ಶಾಸನದ ೪೨–೪೪ನೇ ಪಂಕ್ತಿಗಳಲ್ಲಿ ಸ್ಮೃತನಾಗಿರುವ ವಕ್ರಗಚ್ಛದ ಬಾಲಚಂದ್ರನು ಆ ಶಾಸನದ ೫೭–೫೯ನೆಯ ಪಂಕ್ತಿಗಳಲ್ಲಿ ದೇವಿಸೆಟ್ಟಿಯ ಗುರುವೆಂದೂ ಮಹಾಮಂಡಲಾಚಾರ್ಯನೆಂದೂ ಸ್ಮೃತನಾಗಿರುವ ಬಾಲಚಂದ್ರನಿಂದ ಅಭಿನ್ನನೆಂದೂ ಸ್ಪಷ್ಟವಾಗದಿರಲಾರದು. ಬೇಲೂರು ೧೨೯ನೇ ಶಾಸನದ ಆದಿಯಲ್ಲಿಯೂ ಅಂತ್ಯದಲ್ಲಿಯೂ ಹೇಳಲ್ಪಟ್ಟಿರುವ ಮಹಾಮಂಡಲಾಚಾರ್ಯ ಬಾಲ

5. ಈ ಶಾಸನದಲ್ಲಿ "ಕವಡಮಯ್ಯನ ದೇವಿಸೆಟ್ಟಿ ತಾನು ಕಟ್ಟಿಸಿದ ವೀರಬಲ್ಲಾಳ ಜಿನಾಲಯಕ್ಕಾಗಿ ಬಾಲಚಂದ್ರನೆಂಬ ಜೈನಗುರುವಿಗೆ ೧೧೭೬ರಲ್ಲಿ ದತ್ತಿಯನ್ನು ಬಿಟ್ಟಂತೆ ಹೇಳಿದೆ" ಎಂದು (ಪುಟ XLV) ಮ॥ ಆಚಾರ್ಯರು ಹೇಳಿರುವ ಅಭಿಪ್ರಾಯವೂ ತಪ್ಪಾದುದೆಂದು ನನಗೆ ತೋರುವುದು. ಶಾಸನದ ೫೭–೬೦ನೆಯ ಪಂಕ್ತಿಗಳಲ್ಲಿ ಅನೇಕ ಅಕ್ಷರಗಳು ಗಲಿತವಾಗಿದ್ದಾಗ್ಯೂ, ದೇವಿಸೆಟ್ಟಿಯು ವೀರಬಲ್ಲಾಳನು ಅಮರದಾನವನ್ನು ಮಾಡುವಾಗ ಅವನಿಗೆ ವಿಜ್ಞಾಪನೆ ಮಾಡಿಕೊಂಡು ತಾನು ಮಾಡಿಸಿದ ಬಸದಿಗಾಗಿ ವೀರಬಲ್ಲಾಳನಿಂದ ಬಾಲಚಂದ್ರನಿಗೆ ದಾನವನ್ನು ಕೊಡಿಸಿದನೆಂದು ಈ ಶಾಸನದಲ್ಲಿ ಹೇಳಲ್ಪಟ್ಟಂತಿರುವುದು.

ಚಂದ್ರನೂ ಇವನೇಯೆ. ಇವನು ಕ್ರಿ. ಶ. ೧೧೭೬ನೇ ವರ್ಷದಲ್ಲಿ ಜೀವಿಸಿದ್ದನೆಂದು ಕಲಸಾಪುರದ ಶಾಸನದಿಂದ ತಿಳಿದುಬರುವುದರಿಂದ ಇವನು ಪುಸ್ತಕ ಗಚ್ಛದ ಗುರುವಾದ ಅಧ್ಯಾತ್ಮಿ ಬಾಲಚಂದ್ರನ ಸಮಕಾಲೀನನೆಂದೂ, ಇವನನ್ನು ಸ್ತುತಿಸುವ ಶ್ರ. ಬೆ. ೬೯ನೆಯ ಶಾಸನವು ಕ್ರಿ. ಶ. ಸುಮಾರು ೧೧೮೦ರಲ್ಲಿ ಹುಟ್ಟಿತೆಂದೂ ನಾನು ಮೇಲೆ (ಪುಟ ೪೨, ೩೬) ಹೇಳಿರುವ ಅಭಿಪ್ರಾಯವು ಸಂಗತವಾಗಿಯೇ ಇರುವುದು.

"'ನೂತ್ನ' ಎಂಬ ಪದಕ್ಕೆ ಬದಲು 'ನೂತ' ಎಂದು ತಪ್ಪು ಬಿದ್ದಿದೆ" ಎಂಬುದನ್ನು ನಾನು ತಿಳಿದುಕೊಳ್ಳಲಾರದೆಹೋದೆನೆಂದು ಮ॥ ಆಚಾರ್ಯರು (ಪುಟ XLVI) ನನ್ನಮೇಲೆ ಆಕ್ಷೇಪಮಾಡಿದ್ದಾರೆ. ಒಂದು ಪುಸ್ತಕದಲ್ಲಿ ಮಾತ್ರ ಹೀಗೆ 'ನೂತ' ಎಂದು ಇದ್ದಿದ್ದಲ್ಲಿ, ಒಂದು ವೇಳೆ ಅದು ಮುದ್ರಣದ ತಪ್ಪೆಂದು ನಾನೂ ತಿಳಿದುಕೊಳ್ಳಬಹುದಾಗಿದ್ದಿತೋ ಏನೊ. ಆದರೆ ಕವಿಚರಿತೆಯ ಎರಡನೆಯ ಸಂಪುಟದಲ್ಲಿಯೂ ಮತ್ತು ಒಂದನೇ ಸಂಪುಟದ ಎರಡು ಮುದ್ರಣಗಳಲ್ಲಿಯೂ, ಎಂದರೆ ಮೂರು ಪುಸ್ತಕಗಳಲ್ಲಿಯೂ 'ನೂತ' ಎಂದು ಮುದ್ರಿತವಾಗಿರುವಾಗ, ಅದು ಅಶುದ್ಧವೆಂದು ಊಹಿಸುವುದಕ್ಕೆ ಆರಿಗೆತಾನೆ ಸಾಧ್ಯವಾದೀತು? ಅಶುದ್ಧಗಳಿಲ್ಲದಂತೆ ಪುಸ್ತಕಗಳನ್ನು ಮುದ್ರಿಸುವುದು ಲೇಖಕರ ಕರ್ತವ್ಯವಾಗಿರುವಾಗ, 'ಇದು ಅಶುದ್ಧವೆಂದು ಇವನು ತಿಳಿದುಕೊಳ್ಳಲಿಲ್ಲ' ಎಂದು ವಾಚಕನಮೇಲೆ ಆಕ್ಷೇಪಮಾಡುವುದು ನ್ಯಾಯವೇ?

ಪೊನ್ನನ ಜಿನಾಕ್ಷರಮಾಲೆಗೂ ಮತ್ತು ಅವನ ಶಾಂತಿಪುರಾಣಕ್ಕೂ ಅತ್ಯಂತ ಸಾಮ್ಯವಿರುವುದೆಂದು ಮ॥ ಆಚಾರ್ಯರು (ಪುಟ XLVII) ಬರೆಯುತ್ತಾರೆ. ಅಂತಹ ಸಾಮ್ಯವೇನೂ ನನ್ನ ದೃಷ್ಟಿಗೆ ಬೀಳುವುದಿಲ್ಲವಾದ್ದರಿಂದ, ಇಂಥಿಂಥದರಲ್ಲಿ ಸಾಮ್ಯವಿರುವುದೆಂದು ಅವರು ವ್ಯಕ್ತಪಡಿಸಿದಲ್ಲಿ ನಾವೂ ನೋಡಿ ತಿಳಿದುಕೊಳ್ಳಬಹುದು. ನನಗಂತೂ ಪೊನ್ನನ ಶಾಂತಿಪುರಾಣಕ್ಕೂ ಮತ್ತು ಅವನ ಜಿನಾಕ್ಷರಮಾಲೆಗೂ ಎಷ್ಟು ಸಾಮ್ಯ ಅಥವಾ ವೈಷಮ್ಯವಿರುವುದೋ, ನಾಗಚಂದ್ರನ ಎರಡು ಪುರಾಣಗಳಿಗೂ ಮತ್ತು ಕವಿನೂತ(ತ್ನ) ನಾಗಚಂದ್ರನ ಜಿನಮುನಿತನಯಕ್ಕೂ ಅಷ್ಟೇ ಸಾಮ್ಯ ಅಥವಾ ವೈಷಮ್ಯವು ಇರುವಂತೆ ಕಾಣಿಸುತ್ತದೆ.

ಜಿನಮುನಿತನಯದಲ್ಲಿ ವ್ಯಾಕರಣ ವಿರುದ್ಧವಾದ ಅನೇಕ ಪ್ರಯೋಗಗಳಿರುವುವೆಂದೂ, ಇಂತಹ ಪ್ರಯೋಗಗಳನ್ನು ಉದ್ದಾಮ ಕವಿಯಾದ ನಾಗಚಂದ್ರನು ಮಾಡಿರಲಾರನಾದುದರಿಂದ ಆ ಗ್ರಂಥವು ಅಭಿನವಪಂಪನಿಂದ ಭಿನ್ನನಾದ ಒಬ್ಬ ನಾಗಚಂದ್ರನಿಂದ ರಚಿಸಲ್ಪಟ್ಟಿತೆಂದು ಹೇಳುವುದಕ್ಕೆ ಇದೂ ಒಂದು ಕಾರಣವೆಂದೂ ಮು॥ ಆಚಾರ್ಯರು (ಪುಟ XLVII) ಬರೆದಿರುತ್ತಾರೆ. ವ್ಯಾಕರಣ ವಿರುದ್ಧವಾದ ಪ್ರಯೋಗಗಳನ್ನು ಕಾಳಿದಾಸ, ಭಾರವಿ ಮೊದಲಾದ ಮಹಾಕವಿಗಳೂ ಕೂಡ ಮಾಡಿರುವರೆಂಬುದು ಸಂಸ್ಕೃತ ಕಾವ್ಯ ಪರಿಚಯವುಳ್ಳವರೆಲ್ಲರಿಗೂ ತಿಳಿದ ವಿಷಯವಾಗಿರುವುದು. ಹೀಗೆಯೇ ಕನ್ನಡದಲ್ಲಿಯೂ ರುದ್ರಭಟ್ಟನೇ ಮೊದಲಾದ ಉದ್ದಾಮ ಕವಿಗಳು ಇಂತಹ ಪ್ರಯೋಗಗಳನ್ನು ಮಾಡಿರುವರೆಂಬ ವಿಷಯವು ಜಗನ್ನಾಥವಿಜಯವೇ ಮೊದಲಾದ ಕಾವ್ಯಗಳನ್ನು ಓದುವವರೆಲ್ಲರಿಗೂ ತಿಳಿದುಬರುವುದು. ಆದ್ದರಿಂದ ವ್ಯಾಕರಣ ವಿರುದ್ಧವಾದ ಪ್ರಯೋಗಗಳಿಂದ ಕವಿಯ ಮಹತ್ತ್ವಕ್ಕೆ ವಿಶೇಷವಾಗಿ ಕುಂದಾಗುವುದೆಂದೂ, ಅಂತಹ ಪ್ರಯೋಗಗಳಿರುವ ಗ್ರಂಥಗಳನ್ನು ಉದ್ದಾಮ ಕವಿಯು ಬರೆದಿರಲಾರನೆಂದೂ ಹೇಳಲಾಗುವುದಿಲ್ಲ.

ಪ್ರಕೃತ ಜಿನಮುನಿತನಯದ ವಿಷಯದಲ್ಲಾದರೆ, 'ನೂತ್ನ ನಾಗಚಂದ್ರನ ಭಾಗ್ಯಂ' ಎಂಬುದೇ ಅದರಲ್ಲಿನ ಸರಿಯಾದ ಪಾಠವೆಂಬ ಮು॥ ಆಚಾರ್ಯರ ಹೇಳಿಕೆಯು ನಿಜವಾಗಿದ್ದಲ್ಲಿ, ಆ ಗ್ರಂಥವು ನೂತ್ನ ನಾಗಚಂದ್ರನಿಂದ ಬರೆಯಲ್ಪಟ್ಟಿತೆಂದು ಸ್ಪಷ್ಟವಾಗುವುದರಿಂದ, ಅಭಿನವ ಪಂಪನಿಂದ ಅದು ಬರೆಯಲ್ಪಡಲಿಲ್ಲವೆಂಬುದನ್ನು ನಾನೂ ಅವಶ್ಯವಾಗಿ ಒಪ್ಪಿಕೊಳ್ಳುವೆನು.

## ರುದ್ರಭಟ್ಟ

ಜಗನ್ನಾಥವಿಜಯದ ೨ನೇ ಪದ್ಯದಲ್ಲಿರುವ 'ಪರಮೈಶ್ವರ್ಯ' ಎಂಬ ಪದಕ್ಕೆ 'ವಿಶೇಷವಾದ ಪ್ರಭುತ್ವ ಅಥವಾ ಸಂಪತ್ತು' ಎಂದು ಅರ್ಥವೇ ಹೊರತು, 'ಪರಮೇಶ್ವರತ್ವ, ಎಂದರೆ ಚಕ್ರವರ್ತಿತ್ವ' ಎಂಬ ಅರ್ಥವಿಲ್ಲವೆಂದೂ, ಈ ಅರ್ಥವನ್ನು ಬೋಧಿಸಬೇಕೆಂಬ ಅಭಿಪ್ರಾಯವು ಕವಿಗೆ ಇದ್ದಿದ್ದಲ್ಲಿ ಅವನು 'ಪಾರಮೈಶ್ವರ್ಯ' ಎಂಬ ರೂಪವನ್ನು

ಉಪಯೋಗಿಸುತ್ತಿದ್ದನೆಂದೂ ಮ॥ ಆಚಾರ್ಯರು XLIX ಪುಟದಲ್ಲಿ ಬರೆದಿದ್ದಾರೆ. ಇವರು ಹೇಳುವ 'ಪಾರಮೈಶ್ವರ್ಯ' ಎಂಬ ರೂಪವು ಸಾಧುವಾಗಿರುವಂತೆ ಕಾಣುವುದಿಲ್ಲ. ಉಭಯ ಪದವೃದ್ಧಿಯನ್ನು ವಿಧಿಸುವ 'ಹೃದ್ಭಗಸಿಂಧ್ವಂತೇ ಪೂರ್ವಪದಸ್ಯ ಚ' (ಪಾ. ೭-೩-೧೯) ಎಂದು ಮೊದಲಾದ ಸೂತ್ರಗಳಿಂದಂತೂ ಈ ರೂಪನಿಷ್ಪತ್ತಿಯನ್ನು ಮಾಡಲಾಗುವುದಿಲ್ಲ. ಈ ಪದವಾಗಲಿ 'ಪಾರಮೇಶ್ವರ್ಯ' ಎಂಬ ಇದರ ಸಜಾತೀಯವಾದ ಪದವಾಗಲಿ ಯಾವ ಗ್ರಂಥದಲ್ಲಿಯೂ ಉಪಯೋಗಿಸಲ್ಪಟ್ಟಿಲ್ಲ; ಮತ್ತು ಆಪ್ಟೆಯವರ ಕೋಶ, ಸೆಂಟ್ ಪೀಟರ್ಸ್‌ಬರ್ಗ್ ಕೋಶಗಳು ಮತ್ತು ಆರ್. ಷ್ಮಿಟ್‌ರವರ ಕೋಶ—ಇವುಗಳಲ್ಲಿ ಒಂದರಲ್ಲಿಯೂ ಉಕ್ತವಾಗಿಲ್ಲ. ಸಾಲದುದಕ್ಕೆ ಮಹಾಸ್ರಗ್ಧರಾ ವೃತ್ತದಲ್ಲಿ ರಚಿತವಾದ ರುದ್ರಭಟ್ಟನ ಪದ್ಯದಲ್ಲಿ ಈ ಪದವನ್ನು ಉಪಯೋಗಿಸುವುದಕ್ಕೇ ಆಗುವುದಿಲ್ಲ. ಒಂದುಪಕ್ಷ ಹಾಗೆ ಉಪಯೋಗಿಸುವುದು ಸಾಧ್ಯವೆಂದು ಹೇಳಿದರೂ, ಈ ರೂಪವನ್ನೇ ಉಪಯೋಗಿಸಬೇಕೆಂದೂ, 'ಪರಮೈಶ್ವರ್ಯಂ' ಎಂಬ ರೂಪವನ್ನು ಉಪಯೋಗಿಸಕೂಡದೆಂದೂ ಕವಿಗೆ ನಿಯಾಮಕಮಾಡುವುದಕ್ಕೆ ನಾವು ಯಾರು?

'ಪರಮೈಶ್ವರ್ಯ' ಎಂಬ ಪದವು ಚಕ್ರವರ್ತಿತ್ವವನ್ನು ಬೋಧಿಸುವುದಿಲ್ಲವೆಂಬ ಮ॥ ಆಚಾರ್ಯರ ಅಭಿಪ್ರಾಯವೂ ತಪ್ಪಾದುದು; ಈ ವಿಷಯದಲ್ಲಿ ಸೆಂಟ್ ಪೀಟರ್ಸ್‌ಬರ್ಗಿನ ಬೃಹತ್ಕೋಶವನ್ನೂ ಬೋಪದೇವನ ವ್ಯಾಕರಣ (೮,೫೪) ವನ್ನೂ ನೋಡಿ.

ಸೇವುಣರಾಜನಾದ ಭಿಲ್ಲಮನನ್ನು ವೀರಬಲ್ಲಾಳನು ಕ್ರಿ. ಶ. ಸುಮಾರು ೧೧೯೧ರಲ್ಲಿ† ಜಯಿಸಿ ತದನಂತರ ಪರಮೇಶ್ವರ, ಪರಮಭಟ್ಟಾರಕ ಮೊದಲಾದ ಚಕ್ರವರ್ತಿತ್ವ ಸೂಚಕವಾದ ಬಿರುದುಗಳನ್ನು ವಹಿಸಿಕೊಂಡು ತನ್ನದೇ ಒಂದು ಶಕೆಯನ್ನು ಆ ವರ್ಷದಿಂದ ಪ್ರಾರಂಭಿ

---

† ೧೧೯೧ರಲ್ಲಿ ಜಯಿಸಿದನೆಂಬ ಡಾ॥ ಫ್ಲೀಟ್‌ರವರ ಅಭಿಪ್ರಾಯವು ತಪ್ಪೆಂದೂ, ಈ ಉಕ್ತವೃತ್ತವು ಕ್ರಿ. ಶ. ೧೧೯೦ ನೇ ವರ್ಷದ ಡಿಸೆಂಬರ್ ೨೬ಕ್ಕಿಂತ ಹಿಂದೆ ನಡೆಯಿತೆಂದೂ ನಾನು ಮೇಲೆ ೯೨ ನೇ ಪುಟದಲ್ಲಿ ವ್ಯಕ್ತಪಡಿಸಿರುವೆನು. ಈ ವಿಷಯದಲ್ಲಿ 'ಇಂಡಿಯನ್ ಹಿಸ್ಟಾರಿಕಲ್ ಕ್ವಾರ್ಟರ್ಲಿ' ಎಂಬ ಪತ್ರಿಕೆಯ ೬ ನೇ ಸಂಚಿಕೆಯಲ್ಲಿ ೧೨೪–೧೨೯ ಪುಟಗಳನ್ನು ನೋಡಿ.

ಸಿದನೆಂಬುದು ಕರ್ಣಾಟಕ ದೇಶದ ಇತಿಹಾಸಜ್ಞರೆಲ್ಲರಿಗೂ ತಿಳಿದ ವಿಷಯು. ಇದನ್ನು ಕುರಿತು ಡಾ|| ಫ್ಲೀಟರ ಪೂರ್ವನಿರ್ದಿಷ್ಟ ಗ್ರಂಥದ ೫೦೩ ನೇ ಪುಟವನ್ನೂ ಎಪಿಗ್ರಾಫಿಯು ಇಂಡಿಕ ಪತ್ರಿಕೆಯು ೭ ನೇ ಸಂಪುಟದ ಅಂತ್ಯದಲ್ಲಿ ಡಾ|| ಕೀಲ್‌ಹೋರನ್‌ರವರ ಅನುಬಂಧವನ್ನೂ ನೋಡಿ. ಈ ಪಂಡಿತರಿಬ್ಬರೂ ಸುಪ್ರಸಿದ್ಧ ಸಂಶೋಧಕರು, ಐತಿಹಾಸಿಕರು. ಇಂತಹವರು ನಿರ್ಣಯುಮಾಡಿರುವ ವಿಷಯುವನ್ನು ಮು|| ಆಚಾರ್ಯರು ಒಪ್ಪದೆ, ಕೂಲಂಕಷವಾದ ವಿಚಾರವನ್ನೂ[6] ಮಾಡದೆ ಅದು ತಪ್ಪೆಂದು ಒಂದು ಮಾತಿನಲ್ಲಿ ಹೇಳುವುದನ್ನು (ಪುಟ XLIX) ನೋಡಿದರೆ ನಮಗೆ ಪರಮಾಶ್ಚರ್ಯವಾಗುವುದು. ಇಂತಹ ವಿಷಯು

6. ಮು|| ಆಚಾರ್ಯರು ಮಾಡಿರುವ ವಿಚಾರವೆಲ್ಲಾ—

"ಅಲ್ಲದೆ ತ್ರ ಜೆ ೨೪೦ (ಸು ೧೧೭೫), ೧೯೨೬ನೆಯ ವರ್ಷದ ಮೈಸೂರು ಶಾಸನದ ಇಲಾಖೆಯ ವರದಿಯ ೭೫ನೆಯ ಸಂಖ್ಯೆಯ ಶಾಸನ (೧೧೮೭), ೧೯೨೩ನೆಯ ವರ್ಷದ ಅದೇ ಇಲಾಖೆಯ ವರದಿಯ ೫ನೆಯ ಸಂಖ್ಯೆಯ ಶಾಸನ (೧೧೮೫) ಮುಂತಾದ ೧೧೯೦ಕ್ಕೆ ಹಿಂದೆ ಹುಟ್ಟಿದ ಶಾಸನಗಳಲ್ಲಿಯೂ ಕೂಡ ೨ನೆಯ ಬಲ್ಲಾಳನಿಗೆ ಚಕ್ರವರ್ತಿತ್ವ ಸೂಚಕವಾದ ಬಿರುದುಗಳು ಹೇಳಿವೆ ಹಾಗೆಯೇ ನಂಜನಗೂಡು ೭೧ (೧೧೯೨), ತ್ರ. ಬೆ. ೩೩೫ (೧೧೯೫), ತಿರುಮುಕೂಡಲು ನರಸೀಪುರ ೩೧ (೧೧೯೫–೯೬) ಮುಂತಾದ ೧೧೯೦ಕ್ಕೆ ಈಚಗೆ ಹುಟ್ಟಿದ ಶಾಸನಗಳಲ್ಲಿಯೂ ಸಹ ಆ ರಾಜನಿಗೆ ಅಧೀನತಾ ಸೂಚಕವಾದ ಮಹಾಮಂಡಲೇಶ್ವರ ಎಂಬ ಬಿರುದು ಮಾತ್ರ ಹೇಳಿದೆ."

ಎಂಬ ಎರಡು ವಾಕ್ಯಗಳಲ್ಲಿ (ಪುಟ XLIX) ಒಳಪಟ್ಟಿದೆ. ಇವುಗಳಲ್ಲಿ ಮು|| ಆಚಾರ್ಯರಿಂದ ಹೇಳಲ್ಪಟ್ಟ ತ್ರ. ಜೆ. ೨೪೦ ನೇ ಶಾಸನದಲ್ಲಿ ಶಕವರ್ಷವಾಗಲಿ ಬಾರ್ಹಸ್ಪತ್ಯ ಸಂವತ್ಸರವಾಗಲಿ ಯಾವುದೂ ಹೇಳಲ್ಪಟ್ಟಿಲ್ಲ. ಹೀಗೆಯೇ ೧೯೨೩ ನೇ ವರ್ಷದ ವರದಿಯ ೫ ನೇ ಶಾಸನದಲ್ಲೂ ಶಕವರ್ಷವು ಉಕ್ತವಾಗಿಲ್ಲ. ವಿಶ್ವಾವಸು ಸಂವತ್ಸರವು ಮಾತ್ರ ಇಲ್ಲಿ ಉಕ್ತವಾಗಿರುವುದರಿಂದ, ಈ ಶಾಸನದಲ್ಲಿ ಕೀರ್ತಿತನಾದ ಪ್ರತಾಪ ಚಕ್ರವರ್ತಿ ವೀರಬಲ್ಲಾಳನು ಒಂದನೇ ಬಲ್ಲಾಳನೋ ಎರಡನೆಯುವನೋ ಅಥವಾ ಮೂರನೆಯುವನೋ ಎಂಬುದನ್ನು ನಿರ್ಧರಿಸುವುದೇ ಕಷ್ಟವಾಗಿರುವುದು. ಮೂರನೇದಾದ ೧೯೨೬ ನೇ ವರ್ಷದ ವರದಿಯ ೭೫ ನೇ ಶಾಸನದಲ್ಲಾದರೆ ೩ನೇ ಪಂಕ್ತಿಯಲ್ಲಿ 'ಪ್ರತಾಪಚಕ್ರವರ್ತಿ ಹೊಯ್ಸಳ ವೀರ . . .' ಎಂದು ಇಷ್ಟು ಮಾತ್ರ ಅಕ್ಷರಗಳಿರುವುವೇ ಹೊರತು ಪ್ರತಾಪಚಕ್ರವರ್ತಿಯೆಂಬ ವಿಶೇಷಣವು ವೀರಬಲ್ಲಾಳನ ವಿಷಯುದಲ್ಲಿ ಹೇಳಲ್ಪಟ್ಟಿಲ್ಲ. ಹೀಗಿರುವಲ್ಲಿ, ಕ್ರಿ. ಶ. ೧೧೯೦ಕ್ಕಿಂತ ಹಿಂದೆಯೂ ಕೂಡ ವೀರಬಲ್ಲಾಳನಿಗೆ ಚಕ್ರವರ್ತಿತ್ವ ಸೂಚಕವಾದ ಬಿರುದುಗಳಿದ್ದುವೆಂದು ಈ ಮೂರು ಶಾಸನಗಳಿಂದ ನಿರ್ಣಯಿಸುವುದು ಹೇಗೆ ಸಾಧ್ಯವೆಂಬುದು ನನಗೆ ತಿಳಿಯುದು.

ಗಳಲ್ಲಿ ಮ|| ಆಚಾರ್ಯರ ಅಭಿಪ್ರಾಯವು ಸುತರಾಂ ಅನಾದರಣೀಯ ವಾಗಿರುವುದು. ಆದ್ದರಿಂದ ವೀರಬಲ್ಲಾಳನು (ಡಾ|| ಫ್ಲೀಟ್ ಮೊದಲಾದವರು ಹೇಳಿರುವಂತೆ) ಕ್ರಿ. ಶ. ಸುಮಾರು ೧೧೯೦ರಲ್ಲಿ ಚಕ್ರವರ್ತಿತ್ವ ಸೂಚಕವಾದ ಬಿರುದುಗಳನ್ನು ವಹಿಸಿಕೊಂಡನೆಂಬುದರಲ್ಲಿಯೂ, 'ಪರಮೈಶ್ವರ್ಯಾಸ್ಪದಂ' ಎಂದು ಇವನ ವಿಷಯದಲ್ಲಿ ಹೇಳುವ ರುದ್ರಭಟ್ಟನ ಗ್ರಂಥವೂ, 'ಶ್ರೀಮತ್ಪ್ರತಾಪಚಕ್ರವರ್ತಿ ವೀರ ಬಲ್ಲಾಳ' ಎಂದು ಹೇಳುವ ನೇಮಿಚಂದ್ರನ ಲೀಲಾವತಿಯೂ ಕ್ರಿ. ಶ. ೧೧೯೦ಕ್ಕಿಂತ ಈಚೆಗೆ ಬರೆಯಲ್ಪಟ್ಟಿರಬೇಕೆಂಬುದರಲ್ಲಿಯೂ ಯಾವ ಸಂದೇಹವೂ ಇಲ್ಲ.

ಜಗನ್ನಾಥವಿಜಯದ ಎರಡನೇ ಪದ್ಯದಲ್ಲಿರುವ 'ರಾಜರಾಜ ಪ್ರತಿಷ್ಠಾನಿರತಂ' ಎಂಬ ವಿಶೇಷಣವು ವೀರಬಲ್ಲಾಳನ ವಿಷಯದಲ್ಲಿ 'ರಾಜಶ್ರೇಷ್ಠರನ್ನು ಸ್ಥಾಪಿಸುವುದರಲ್ಲಿ ಕುತೂಹಲವುಳ್ಳ' ಎಂಬ ಅರ್ಥವನ್ನು ಬೋಧಿಸುವುದೆಂದೂ, ಆ ಪದಕ್ಕೆ 'ಇನೆಯ ರಾಜರಾಜನೆಂಬ ಚೋಳರಾಜನನ್ನು ರಾಜ್ಯದಲ್ಲಿ ಪ್ರತಿಷ್ಠೆಮಾಡುವುದರಲ್ಲಿ ತತ್ಪರನಾದವನು' ಎಂದು ಅರ್ಥಮಾಡುವುದು ತಪ್ಪೆಂದೂ ಮ|| ಆಚಾರ್ಯರು XLIX ಪುಟದಲ್ಲಿ ಬರೆದಿದ್ದಾರೆ.[7] ರಾಜರಾಜ ಎಂಬ ಪದಕ್ಕೆ 'ರಾಜಶ್ರೇಷ್ಠ' ಎಂಬ ಅರ್ಥವಿದೆಯೆಂಬುದನ್ನೂ, ಆದ್ದರಿಂದ ಮೇಲೆ ಹೇಳಿದ 'ರಾಜರಾಜ ಪ್ರತಿಷ್ಠಾನಿರತಂ' ಎಂಬ ಪದಕ್ಕೆ (ಮ|| ಆಚಾರ್ಯರು ಹೇಳುವಂತೆ)

---

ಇನ್ನು ಮ|| ಆಚಾರ್ಯರು ಹೇಳಿರುವಂತೆ ೧೧೯೦ಕ್ಕಿಂತ ಈಚೆಗೆ ಹುಟ್ಟಿದ ಅನೇಕ ಶಾಸನಗಳಲ್ಲಿ ವೀರಬಲ್ಲಾಳನಿಗೆ ಮಹಾಮಂಡಲೇಶ್ವರ ಎಂಬ ಬಿರುದು ಮಾತ್ರ ಹೇಳಲ್ಪಟ್ಟಿರುವುದೆಂಬುದು ನಿಜ. ಆದರೆ ಇದರಿಂದ 'ಅವನು ಕ್ರಿ. ಶ. ೧೧೯೦ರಲ್ಲಿ ಚಕ್ರವರ್ತಿ ಬಿರುದುಗಳನ್ನು ವಹಿಸಿದನು' ಎಂಬುದೂ ಮೇಲೆ (ಪುಟ ೯೧) ಹೇಳಿದ ಚನ್ನರಾಯಪಟ್ಟಣದ ೧೭೯ ನೇ ಶಾಸನದಲ್ಲಿ ಅವನಿಗೆ ಪರಮೇಶ್ವರ, ಪರಮಭಟ್ಟಾರಕ ಮೊದಲಾದ ಬಿರುದುಗಳು ಹೇಳಲ್ಪಟ್ಟಿವೆಯೆಂಬುದೂ ಸುಳ್ಳಾಗುವುದೇ ?

7. ಈ ಅಭಿಪ್ರಾಯವು ಮ|| ಆಚಾರ್ಯರಿಗೆ ನನ್ನ "ಕೆಲವು ಕನ್ನಡ ಕವಿಗಳ ಜೀವನಕಾಲವಿಚಾರ" ವನ್ನು ಓದಿದ ಮೇಲೆ ಉಂಟಾಗಿರಬೇಕೇ ಹೊರತು, ಅದಕ್ಕೆ ಮುಂಚೆ ಅವರಿಗೆ ಇರಲಿಲ್ಲ. ಏಕೆಂದರೆ, ನಾವು ಮೇಲೆ (ಪುಟ ೯೫) ನೋಡಿರುವಂತೆ, ರುದ್ರಭಟ್ಟನ ಜೀವನಕಾಲ ವಿಚಾರಾವಸರದಲ್ಲಿ ಮ|| ಆಚಾರ್ಯರು 'ಬಲ್ಲಾಳರಾಜರಿಗೆ ಚೋಳರಾಜ ಪ್ರತಿಷ್ಠಾಚಾರ್ಯ ಎಂಬ ಬಿರುದು ಅನೇಕ ಶಾಸನಗಳಲ್ಲಿ ದೊರೆಯುತ್ತದೆ. ರಾಜರಾಜ ಎಂಬ ಹೆಸರು

'ರಾಜಶ್ರೇಷ್ಠರನ್ನು ಸ್ಥಾಪಿಸುವುದರಲ್ಲಿ ಆಸಕ್ತನು' ಎಂದೂ ಅರ್ಥ ಮಾಡಬಹುದೆಂಬುದನ್ನೂ ನಾನೂ ಒಪ್ಪಿಕೊಳ್ಳುತ್ತೇನೆ. ಆದರೆ ಹೀಗೆಯೇ 'ಪದ್ಮಾನುಷಂಗಿತ್ವಂ' ಎಂಬ ಪದಕ್ಕೆ 'ಲಕ್ಷ್ಮಿಯ ಸಂಬಂಧ' ಎಂದೂ, 'ಅರಿಕಾಮಧ್ವಂಸಿ' ಎಂಬ ಪದಕ್ಕೆ 'ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯವೆಂಬ ಅರಿಷಡ್ವರ್ಗಾಂತರ್ಗತವಾದ ಕಾಮವನ್ನು ಜಯಿಸಿದವನು' ಎಂದೂ, 'ಪರಮೈಶ್ವರ್ಯಾಸ್ಪದಂ' ಎಂಬ ಪದಕ್ಕೆ

---

ಚೋಳರಲ್ಲಿಯೇ ವಿಶೇಷವಾಗಿದೆ' ಎಂದು ಕವಿಚರಿತೆಯ ಒಂದನೇ ಸಂಪುಟದ ಪ್ರಥಮ ಮುದ್ರಣದಲ್ಲಿಯೂ, 'ರಾಜರಾಜ ಎಂಬ ಹೆಸರುಳ್ಳ ಮೂರು ಚೋಳರಾಜರಿದ್ದರು ಇವರಲ್ಲಿ ೩ನೆಯವನು ಹೊಯ್ಸಳರಾಜರ ಸಹಾಯದಿಂದ ಕಳೆದುಕೊಂಡಿದ್ದ ಸಿಂಹಾಸನವನ್ನು ಪುನಃ ಪಡೆದನು' ಎಂದು (ಮೇಲೆ ಹೇಳಿದ ೨ನೇ ವಾಕ್ಯದ ಸ್ಥಾನದಲ್ಲಿ) ಎರಡನೇ ಮುದ್ರಣದಲ್ಲಿಯೂ ಬರೆದಿದ್ದಾರೆ. ಆದ್ದರಿಂದ ಆ ಕಾಲದಲ್ಲಿ ಮ|| ಆಚಾರ್ಯರು ಕೂಡ ನೀರಬಲ್ಲಾಳನ ವಿಷಯದಲ್ಲಿ 'ರಾಜರಾಜ' ಎಂಬ ಪದಕ್ಕೆ ಚೋಳರಾಜನಾದ 'ರಾಜರಾಜ' ಎಂದು ಅರ್ಥಮಾಡುತ್ತಿದ್ದರೆಂಬುದು ಸ್ಪಷ್ಟ.

ಹೀಗೆಯೇ ಮ|| ಆಚಾರ್ಯರು—

"'ಮಾರ್ಗದ್ವಯ ಪರಿಣತ ಕವಿ| ಮಾರ್ಗ ಮನೋಹಾರಿಯಾದುದೆಂದಖಿಳ ಬುಧರ್|
ನಿಗರ್ವರಾಗಿ ಪಂಪನ| ಗೀಗುಂಫದ ಪೆಂಪನಾಗಳುಂ ಬಣ್ಣಿಸುವರ್||'

ಎಂಬ ಪದ್ಯದಲ್ಲಿ ದುರ್ಗಸಿಂಹನಿಂದ ಅಭಿನವಪಂಪನು ಸ್ತುತನಾಗಿರುವನು" ಎಂದು ತಾವು I, ೧೦೩ರಲ್ಲಿ ಹೇಳಿರುವ ಅಭಿಪ್ರಾಯವನ್ನೂ, ಮಲ್ಲಿಕಾರ್ಜುನನ ಸೂಕ್ತಿಸುಧಾರ್ಣವದ ಪೀಠಿಕಾಪ್ರಾಸದಲ್ಲಿರುವ, 'ಪಣೆದಂಬೊಯ್ಕಲ್ ಜವಂ ರಾಯರನೆ ಬಯಸಿ ಬರ್ಪಂತೆ ಸೋಮೇಶ್ವರಂ......' ಎಂಬ ಪದ್ಯವು ಮಲ್ಲಿಕಾರ್ಜುನ ಕೃತವಾದುದೆಂದು I, ೩೭೨ರಲ್ಲಿ ತಾವು ಹೇಳಿರುವ ಅಭಿಪ್ರಾಯವನ್ನು ಈಚೆಗೆ ಮಾರ್ಪಡಿಸಿಕೊಂಡಿರುತ್ತಾರೆ. (ಕವಿಚರಿತೆ ೩, ಕನ್ನಡ ಅವತರಣಿಕೆ ಪುಟ XII ಮತ್ತು ಪುಟ ೪೮೮ನ್ನು ನೋಡಿ) ವಸ್ತುತಃ ಕವಿಚರಿತೆ, ೧ನೇ ಸಂಪುಟದಲ್ಲಿ ಅವರು ಹೇಳಿರುವ ಅಭಿಪ್ರಾಯಗಳೇ ಸಂಗತವಾಗಿವೆಯೆಂಬುದರಲ್ಲಿಯೂ, ೩ನೇ ಸಂಪುಟದಲ್ಲಿ ಅವರು ಈ ವಿಷಯದಲ್ಲಿ ಮಾರ್ಪಡಿಸಿ ಹೇಳಿರುವ ಅಭಿಪ್ರಾಯಗಳು ತಪ್ಪೆಂಬುದರಲ್ಲಿಯೂ ಯಾವ ಸಂದೇಹವೂ ಇಲ್ಲ. ಹೀಗೆ ತಮ್ಮ ಅಭಿಪ್ರಾಯಗಳು ಸಾಧುವಾಗಿದ್ದಾಗ್ಯೂ ಕೂಡ, ಅವನ್ನು ಮ|| ಆಚಾರ್ಯರು (ತಪ್ಪಾಗಿ) ಮಾರ್ಪಡಿಸಿ ಇಂತಹ ಮಾರ್ಪಾಟಿಗೆ ಆವ ಕಾರಣವನ್ನೂ ಹೇಳಿಲ್ಲದೆ ಇರುವುದನ್ನು ನೋಡಿದರೆ ಆ ಅಭಿಪ್ರಾಯಗಳು ನಾನು ಮಾಡಿರುವ ನಿರ್ಣಯಗಳಿಗೆ ಬಾಧಕವಾಗಿರುವುವೆಂಬ ದೋಷಕ್ಕಾಗಿಯೇ ಅವರು ಅವನ್ನು ನಿರಾಕರಿಸಿರುವರೆಂದು ನಾವು ಊಹಿಸಬೇಕಾಗಿರುವುದು.

(ಮ|| ಆಚಾರ್ಯರು ಹೇಳಿರುವಂತೆ) 'ವಿಶೇಷವಾದ ಪ್ರಭುತ್ವಕ್ಕೆ ಅಥವಾ ಸಂಪತ್ತಿಗೆ ನೆಲೆ' ಎಂದೂ, ಮತ್ತು 'ಉಮಾಕಾಮಿನೀ ಜೀವಿತೇಶಂ' ಎಂಬ ಪದಕ್ಕೆ 'ಕೀರ್ತಿ[8]ಯೆಂಬ ಸ್ತ್ರೀಯ ಪ್ರಾಣನಾಥನು' ಎಂದೂ ಅರ್ಥಮಾಡಲು ಸಾಧ್ಯವಾಗಿರುವುದರಿಂದ, ಜಗನ್ನಾಥವಿಜಯದ ಮಂಗಳ ಪದ್ಯಗಳಲ್ಲಿರುವ 'ಅರಿಕಾಮಧ್ವಂಸಿ' ಮೊದಲಾದ ವಿಶೇಷಣಗಳಿಗೆ ಈಗ ಹೇಳಿದಂತೆ 'ಅರಿಷಡ್ವರ್ಗಗಳಲ್ಲಿ ಒಂದಾದ ಕಾಮವನ್ನು ಜಯಿಸಿದವನು' ಎಂದು ಮೊದಲಾದ ಅರ್ಥಗಳನ್ನು ಹೇಳಬೇಕೋ, ಅಥವಾ ಮೇಲೆ (ಪುಟ ೯೮ ಆದಿ) ಹೇಳಿದಂತೆ, 'ಶತ್ರುವಾದ ಮಹಾಮಂಡಲೇಶ್ವರ ಕಾಮದೇವನನ್ನು ಕೊಂದವನು', 'ಇನೆಯ ರಾಜರಾಜನೆಂಬ ಚೋಳರಾಜನನ್ನು ಸ್ಥಾಪಿಸುವದರಲ್ಲಿ ಆಸಕ್ತನು', 'ಉಮಾದೇವಿಯ ಪ್ರಾಣನಾಥನು', 'ಚಕ್ರವರ್ತಿತ್ವಕ್ಕೆ ನೆಲೆಯಾದವನು' ಮತ್ತು 'ಪದ್ಮಾದೇವಿಯ ಸಂಬಂಧ (ವಿರಲಾಗಿ)' ಎಂದು ಅರ್ಥಮಾಡಬೇಕೋ ಎಂಬುದನ್ನು ಕುರಿತು ಸ್ವಲ್ಪ ವಿಚಾರಮಾಡಬೇಕಾಗಿರುವುದು.

ರುದ್ರಭಟ್ಟನು ಜಗನ್ನಾಥವಿಜಯದಲ್ಲಿ ಅದು ಇಂತಹ ವರ್ಷದಲ್ಲಿ ಅಥವಾ ಇಂಥ ರಾಜನ ಆಳಿಕೆಯಲ್ಲಿ ರಚಿಸಲ್ಪಟ್ಟಿತೆಂಬ ವಿಷಯವಾಗಿ ಏನನ್ನೂ ಬರೆದಿಲ್ಲ. ಆ ಗ್ರಂಥದ ಪದ್ಯಗಳು ಮಲ್ಲಿಕಾರ್ಜುನನ ಸೂಕ್ತಿಸುಧಾರ್ಣವದಲ್ಲಿ ಉದ್ಧರಿಸಲ್ಪಟ್ಟಿರುವುದರಿಂದ ಅದು ಕ್ರಿ. ಶ. ೧೨೬೪ ಅಥವಾ ೧೨೪೫*ಕ್ಕಿಂತ ಹಿಂದೆ ರಚಿಸಲ್ಪಟ್ಟಿರಬೇಕು. ಅದರಲ್ಲಿ ರುದ್ರಭಟ್ಟನು ಕಣ್ಣಪನನ್ನು ಸ್ತುತಿಸಿರುವುದರಿಂದ ಈ ಕಣ್ಣಪನು ಮಾಳವೀಮಾಧವದ ಕರ್ತೃವಾದ ಕಣ್ಣಮಯ್ಯನಾಗಿದ್ದರೆ, ಆ ಗ್ರಂಥವು ಕ್ರಿ. ಶ. ಸುಮಾರು ೧೦೦೦ಕ್ಕಿಂತ[9] ಈಚೆಗೂ, ಅವನು ನೇಮಿನಾಥ

8. 'ಉಮಾ' ಎಂಬ ಪದಕ್ಕೆ 'ಕೀರ್ತಿ' ಎಂಬ ಅರ್ಥವೂ ಉಂಟು. ಈ ವಿಷಯದಲ್ಲಿ ಹೇಮಚಂದ್ರನ ಅನೇಕಾರ್ಥ ಸಂಗ್ರಹವನ್ನೂ, ಮೇದಿನೀಕೋಶವನ್ನೂ, ಆಪ್ಟೆಯವರ ಕೋಶವನ್ನೂ ಮತ್ತು ಸೆಂಟ್‌ಪೀಟರ್ಸ್‌ಬರ್ಗ್ ಕೋಶಗಳನ್ನೂ ನೋಡಿ.

9. ಇವನು ಕ್ರಿ. ಶ. ೧೦೩೫–೧೦೪೨ರಲ್ಲಿ ಬರೆಯಲ್ಪಟ್ಟ ದುರ್ಗಸಿಂಹನ ಪಂಚತಂತ್ರದಲ್ಲಿ ಸ್ತುತಿಸಲ್ಪಟ್ಟಿರುವುದರಿಂದ ಕ್ರಿ. ಶ. ೧೦ ನೇ ಶತಮಾನದ ಅಂತ್ಯ ಪಾದದಲ್ಲಿ ಇವನು ಜೀವಿಸಿದ್ದನೆಂದು ತೋರುತ್ತದೆ.

ಪುರಾಣದ ಕರ್ತೃವಾದ ಕರ್ಣಪನಾಗಿದ್ದರೆ ಕ್ರಿ. ಶ. ಸುಮಾರು ೧೧೭೪ ಅಥವಾ ೧೧೪೦*ಕ್ಕಿಂತ ಈಚೆಗೂ ಬರೆಯಲ್ಪಟ್ಟಿರಬೇಕು. ಕ್ರಿ. ಶ. ೧೦೦೦, ೧೨೬೩ರ ಮಧ್ಯೆ ಇಂಥ ವರ್ಷದಲ್ಲಿ ಇದು ರಚಿಸಲ್ಪಟ್ಟಿತೆಂಬುದನ್ನು ನಾವು ಆ ಗ್ರಂಥದಲ್ಲಿರುವ 'ಚಂದ್ರಮೌಳಿ ಪ್ರಮುಖ ನಿಖಿಲ ವಿದ್ವಜ್ಜನಂ ಮೆಚ್ಚೆ ಪೇಳ್ದಿಂ' ಎಂಬ ಪದ್ಯಭಾಗದ ಮತ್ತು ಗ್ರಂಥಾದಿಯಲ್ಲಿರುವ ಮಂಗಳ ಪದ್ಯಗಳ ಆಧಾರ ಬಲದಿಂದ ನಿಶ್ಚಯಿಸಬೇಕಾಗಿರುವುದು.

'ಚಂದ್ರಮೌಳಿ' ಎಂಬ ಹೆಸರು 'ಶಂಕರ', 'ಗೋವಿಂದ' ಎಂಬ ಹೆಸರುಗಳಂತೆ ಸಾಮಾನ್ಯವಾಗಿ ಬಳಕೆಯಲ್ಲಿರುವ ಹೆಸರುಗಳಲ್ಲಿ ಒಂದಾದ್ದರಿಂದ, ಕ್ರಿ. ಶ. ೧೦೦೦, ೧೨೬೩ರ ಮಧ್ಯೆ ಆ ಹೆಸರಿನ ಪಂಡಿತನೊಬ್ಬನು ಕರ್ಣಾಟಕ ದೇಶದಲ್ಲಿ ಇಲ್ಲದೇ ಇದ್ದಂಥ ವರ್ಷವೇ ಇಲ್ಲವೆಂದು ಹೇಳಬಹುದು. ಆದ್ದರಿಂದ ಈ ಹೆಸರು ಒಂದರ ಆಧಾರ ಬಲದಿಂದ ರುದ್ರಭಟ್ಟನು ಇಂತಹ ಕಾಲದಲ್ಲಿ ಜೀವಿಸಿದ್ದನೆಂಬುದನ್ನು ನಿರ್ಧರಿಸುವುದು ಅಸಾಧ್ಯವೆಂಬುದು ಸ್ಪಷ್ಟ.

ಹೀಗೆಯೇ, ಮಂಗಳ ಪದ್ಯಗಳಲ್ಲಿರುವ 'ಅರಿಕಾಮಧ್ವಂಸಿ' 'ರಾಜರಾಜ ಪ್ರತಿಷ್ಠಾನಿರತಂ', 'ಉಮಾಕಾಮಿಸೀ ಜೀವಿತೇಶಂ' 'ಪರಮೈಶ್ವರ್ಯಾಸ್ಪದಂ' ಮತ್ತು 'ಪದ್ಮಾನುಷಂಗಿತ್ವಂ (ಆಗಿರೆ)' ಎಂಬ ಪದಗಳಿಗೆ 'ಅರಿಷಡ್ವರ್ಗಾಂತರ್ಗತವಾದ ಕಾಮನನ್ನು ಜಯಿಸಿದವನು', 'ರಾಜಶ್ರೇಷ್ಠರನ್ನು ಸ್ಥಾಪಿಸುವುದರಲ್ಲಿ ಆಸಕ್ತನು', 'ಕೀರ್ತಿಯೆಂಬ ಸ್ತ್ರೀಗೆ ಪ್ರಾಣನಾಥನು', 'ಅತಿಶಯವಾದ ಪ್ರಭುತ್ವಕ್ಕೆ (ಅಥವಾ ಸಂಪತ್ತಿಗೆ) ನೆಲೆ' ಮತ್ತು 'ಲಕ್ಷ್ಮಿಯ ಸಂಬಂಧ (ವಿರಲಾಗಿ)' ಎಂದು ಅರ್ಥಮಾಡಿದಲ್ಲಿ ಈ ವಿಶೇಷಣಗಳು ಆ ಕಾಲದಲ್ಲಿ ಪ್ರಬಲರಾಗಿದ್ದ ಎಲ್ಲಾ ರಾಜರಿಗೂ ಹೊಂದುವುದರಿಂದ, ಇವುಗಳ ಆಧಾರ ಬಲದಿಂದ ರುದ್ರಭಟ್ಟನ ಕಾಲವನ್ನು ನಿರ್ಣಯಿಸುವುದು ಅಸಾಧ್ಯವೆಂಬುದೂ ಸ್ಪಷ್ಟ. ಈ ವಿಶೇಷಣಗಳಿಗೆ 'ಶತ್ರುವಾದ ಮಹಾಮಂಡಲೇಶ್ವರ ಕಾಮದೇವನನ್ನು ಕೊಂದವನು', 'ರಾಜರಾಜನೆಂಬ

ಚೋಳರಾಜನನ್ನು ರಾಜ್ಯದಲ್ಲಿ ಸ್ಥಾಪಿಸುವುದರಲ್ಲಿ ಆಸಕ್ತನು', 'ಉಮಾ ದೇವಿಯ ಪ್ರಾಣನಾಥನು', 'ಚಕ್ರವರ್ತಿತ್ವಕ್ಕೆ ನೆಲೆ' ಮತ್ತು 'ಪದ್ಮಾ ದೇವಿಯ ಸಂಬಂಧ (ವಿರಲಾಗಿ)' ಎಂದು ಅರ್ಥಮಾಡಿದಲ್ಲಿ ಇವೆಲ್ಲವೂ ಹೊಯ್ಸಳ ಚಕ್ರವರ್ತಿಯಾದ ೨ನೇ ವೀರಬಲ್ಲಾಳನೊಬ್ಬನಿಗೆ ಮಾತ್ರ ಹೊಂದುವುದರಿಂದ, ರುದ್ರಭಟ್ಟನು ಆ ರಾಜನ ಆಳಿಕೆಯಲ್ಲಿ ಜೀವಿಸಿದ್ದ ನೆಂದು ದ್ಯೋತಿತವಾಗುವುದು.

ಇಂತಹ ಸಂದರ್ಭಗಳಲ್ಲಿ ಇಂತಹ ಅರ್ಥವನ್ನೇ ಹೇಳಬೇಕೆಂದು ನಿಯಮಿಸುವ ಶಾಸ್ತ್ರಸಿದ್ಧವಾದ ನ್ಯಾಯವೊಂದುಂಟು. ಒಂದು ವಾಕ್ಯದಲ್ಲಿ ಪ್ರಯುಕ್ತವಾಗಿರುವ ಪದಕ್ಕೆ ಸಾಮಾನ್ಯಾರ್ಥ (ಎಂದರೆ, ಈ ವಾಕ್ಯದಲ್ಲಿಯೂ ಮತ್ತು ಆ ಪದವು ಪ್ರಯುಕ್ತವಾಗಿರುವ ಇತರ ಎಲ್ಲಾ ವಾಕ್ಯಗಳಲ್ಲಿಯೂ ಹೊಂದುವಂಥ ಅರ್ಥ), ವಿಶೇಷಾರ್ಥ (ಎಂದರೆ, ಈ ಒಂದು ವಾಕ್ಯದಲ್ಲಿ ಮಾತ್ರ ಹೊಂದುವಂಥ ಅರ್ಥ) ವೆಂಬ ಎರಡು ಅರ್ಥಗಳಿದ್ದಲ್ಲಿ, ಪ್ರಕೃತ ವಾಕ್ಯದಲ್ಲಿ ಆ ಪದಕ್ಕೆ ವಿಶೇ ಷಾರ್ಥವನ್ನೇ ಹೇಳಬೇಕೆಂದು ಮೀಮಾಂಸಾದಿ ಶಾಸ್ತ್ರಗಳಲ್ಲಿನ ನಿಯಮ. ಇಂಥ ನಿಯಮಗಳು ಶಾಸ್ತ್ರ ಗ್ರಂಥಗಳಲ್ಲಿ ಮಾತ್ರವಲ್ಲದೆ ಇತರ ಎಲ್ಲಾ ವಿಧವಾದ ಗ್ರಂಥಗಳಲ್ಲಿಯೂ ಪ್ರವರ್ತಿಸುವುದರಿಂದ, ಪ್ರಕೃತ ಜಗನ್ನಾಥವಿಜಯದ ಮಂಗಳ ಪದ್ಯಗಳಿಗೆ ಅರ್ಥ ಮಾಡುವಾಗ 'ಅರಿಕಾಮಧ್ವಂಸಿ' ಮೊದಲಾದ ಮೇಲೆ ಹೇಳಿದ ವಿಶೇಷಣಗಳಿಗೆ 'ಶತ್ರುವಾದ ಕಾಮದೇವನನ್ನು ಕೊಂದವನು' ಎಂದು ಮೊದಲಾಗಿಯೇ ಅರ್ಥಮಾಡಬೇಕೇ ಹೊರತು 'ಅರಿಷಡ್ವರ್ಗಾಂತರ್ಗತವಾದ ಕಾಮ ವನ್ನು ಜಯಿಸಿದವನು' ಎಂದು ಮೊದಲಾಗಿ ಅರ್ಥಮಾಡಕೂಡದೆಂದು ಮೇಲೆ ಹೇಳಿದ ಶಾಸ್ತ್ರ ನ್ಯಾಯದಿಂದ ಸಿದ್ಧವಾಗುವುದು.

ಹೀಗೆ 'ರಾಜರಾಜನೆಂಬ ಚೋಳರಾಜನನ್ನು ರಾಜ್ಯದಲ್ಲಿ ಸ್ಥಾಪಿಸುವುದರಲ್ಲಿ ಆಸಕ್ತನು' ಎಂಬ ವಿಶೇಷಣವು ಜಗನ್ನಾಥವಿಜಯ ದಲ್ಲಿ ವೀರಬಲ್ಲಾಳನ ವಿಷಯದಲ್ಲಿ ಹೇಳಲ್ಪಟ್ಟಿರುವುದರಿಂದ, ಆ ಗ್ರಂಥವು ಕ್ರಿ. ಶ. ೧೨೧೮–೨೦ರಲ್ಲಿ ಬರೆಯಲ್ಪಟ್ಟಿತೆಂಬುದು ಸ್ಪಷ್ಟ (ಮೇಲೆ ೧೦೭–೧೧೪ ಪುಟಗಳನ್ನು ನೋಡಿ).

## ಸು ಮ ನೋ ೞ ಬಾ ಣ

"ಈ ಕವಿಯ ನಿಜವಾದ ಹೆಸರು ಶಂಕರ ಎಂದು ಜನ್ನನು ಹೇಳು ವುದರಿಂದ ಸುಮನೋಬಾಣ ಎಂಬುದು ಇವನ ಬಿರುದಾಗಿರಬಹುದು" ಎಂಬ ಮ॥ ಆಚಾರ್ಯರ ಅಭಿಪ್ರಾಯವು (ಕವಿಚರಿತೆ I, 162) ಸಾಧು ವಾಗಿಲ್ಲವೆಂದು ನಮಗೆ ತೋರುವುದು: ಏಕೆಂದರೆ, (೧) ತನ್ನ ತಂದೆಯು ಶಂಕರನೆಂದು ಹೇಳುವಾಗ ಜನ್ನನು ಅವನಿಗೆ ಸುಮನೋಬಾಣ, ನವೀನೋಜ್ವಲಬಾಣ ಮತ್ತು ಇದಾನೀಂತನಶರ್ವವರ್ಮ ಎಂಬ ಬಿರುದುಗಳಲ್ಲಿ ಒಂದಾದರೂ ಇತ್ತೆಂದಾಗಲಿ, ಅಥವಾ ಅವನು ಹೊಯ್ಸಳ ನರಸಿಂಹನ ಸಭೆಯಲ್ಲಿ ಕಟಕೋಪಾಧ್ಯಾಯನಾಗಿದ್ದನೆಂದಾ ಗಲಿ ಹೇಳಿಲ್ಲ. (೨) ಮಲ್ಲಿಕಾರ್ಜುನ ಕೇಶಿರಾಜರು 'ಯಾದವ ಕಟಕಾ ಚಾರ್ಯ ಕವಿಸುಮನೋಬಾಣನ ಜಾಮಾತೃ', 'ಕವಿಸುಮನೋ ಬಾಣನ ಯಾದವ ಕಟಕಾಚಾರ್ಯನೆನಿಪ ದೌಹಿತ್ರನೆ ನಾಂ' ಎಂದು ತಮ್ಮ ವಿಷಯದಲ್ಲಿ ಹೇಳಿಕೊಂಡಿರುವರಷ್ಟೆ. ಇಂಥ ಸಂದರ್ಭಗಳಲ್ಲಿ ಮಾವನ ಮತ್ತು ಮಾತಾಮಹನ ನಿಜ ನಾಮಧೇಯವನ್ನು ಹೇಳು ವುದು ಸಹಜವಾಗಿರುವುದೇ ಹೊರತು, ಅಂಥವರ ಬಿರುದೊಂದನ್ನು ಹೇಳುವುದು ಸಹಜವಲ್ಲ. 'ನಾನು ಸಾಹಿತ್ಯ ರತ್ನಾಕರನ ಮಗನು; ನಾನು ಉಭಯ ಕವಿ ಶರಭಭೇರುಂಡನ ದೌಹಿತ್ರನು' ಎಂದು ಮೊದ ಲಾಗಿ ಈವರೆಗೆ ಯಾರು ಹೇಳಿಕೊಂಡಿರುವುದನ್ನೂ ನಾವು ಕಾಣೆವು. ಹೀಗೆಯೇ 'ಸುಮನೋಬಾಣ ಕವೀಂದ್ರ ಪ್ರಮುಖಂ ಬೆರಸು' ಎಂದು ಸೋಮನಾಥನು ಕಲ್ಯಾಣಕಾರಕದಲ್ಲಿ ಬರೆದಿರುವ ವಾಕ್ಯದಿಂದಲೂ ಕೂಡ 'ಸುಮನೋಬಾಣ' ಎಂಬುದು ಕವಿಯ ನಿಜವಾದ ಹೆಸರೆಂದು ಸೂಚಿತವಾದಂತಿರುವುದು.

'ಜನನಾಥಂ ಜಗದೇಕನಲ್ಲಿ ಕಟಕೋಪಾಧ್ಯಾಯನಾ ನಾಗ ವರ್ಮಂ....' ಎಂಬ ಪದ್ಯಕ್ಕೆ ನಾನು ಮೇಲೆ (ಪುಟ ೧೩೨–೧೩೩) ಹೇಳಿರುವ ಅರ್ಥವು ತಪ್ಪೆಂದೂ, "ಕನ್ನಡ ಪಂಡಿತರಾರೇ ಆಗಲಿ ಉಪಾಧ್ಯಾಯಂ ಎಂಬುದರವರೆಗೆ ಒಂದು ವಾಕ್ಯ, ಉಳಿದ ಭಾಗವು ಒಂದು ವಾಕ್ಯ. ಹೀಗೆ ಈ ಪದ್ಯವು ಎರಡು ವಾಕ್ಯಗಳನ್ನು ಒಳಕೊಂಡಿದೆ

ಎಂದೂ, ಇದಕ್ಕೆ 'ಜಗದೇಕಮಲ್ಲ ರಾಜನಲ್ಲಿ ಕಟಕೋಪಾಧ್ಯಾಯನೂ ಅಭಿನವ (ಇದಾನೀಂತನ) ಶರ್ವವರ್ಮನೆನ್ನಿಸಿಕೊಂಡವನೂ ಆಗಿದ್ದ ಪ್ರಸಿದ್ಧನಾದ ನಾಗವರ್ಮನು ಜನ್ನನಿಗೆ ಉಪಾಧ್ಯಾಯನು; ಈಗ ನೃಸಿಂಹರಾಜನಲ್ಲಿ ಕಟಕೋಪಾಧ್ಯಾಯನಾರೆಂದು ಕೇಳುವೆಯಾ? ಅವನು ಕವಿಶ್ರೇಷ್ಠರೊಳಗೆ ಸೂಕ್ತಿಯಲ್ಲಿ ಅಭಿನವ ಬಾಣನಾದ ಸುಮನೋಬಾಣನು' ಎಂಬುದು ಅರ್ಥವೆಂದೂ[10] ಹೇಳುವರು" ಎಂದೂ LI ಪುಟದಲ್ಲಿ ಬರೆದಿರುವರು.

ಜನ್ನನು ತನ್ನ ಉಪಾಧ್ಯಾಯನನ್ನು ಸ್ತುತಿಸುವುದು ಪ್ರಕೃತ ಸಂದರ್ಭದಲ್ಲಿ ಸಂಗತವೇ ಆಗಿದ್ದಾಗ್ಯೂ, ಸುಮನೋಬಾಣನು ನೃಸಿಂಹ ರಾಜನಲ್ಲಿ ಈಗ ಕಟಕೋಪಾಧ್ಯಾಯನಾಗಿರುವನು ಎಂದು ಹೇಳುವುದಕ್ಕೆ ಇಲ್ಲಿ ಆವಶ್ಯಕತೆ ಏನಿರುವುದು? 'ಜನನಾಥಂ ಜಗದೇಕನಲ್ಲಿ ಕಟಕೋಪಾಧ್ಯಾಯನಾ ನಾಗವರ್ಮಂ....' ಎಂಬ ಪದ್ಯವು ಅನಂತ ನಾಥಪುರಾಣದ[11] ೧ ನೇ ಆಶ್ವಾಸದಲ್ಲಿ ೩೩ ನೇದಾಗಿರುವುದು. ಇದರ ಹಿಂದೆ ಜನ್ನನು ಅನಂತನಾಥ (೧), ಸಿದ್ಧರು (೨), ಆಚಾರ್ಯರು (೩), ಉಪಾಧ್ಯಾಯರು (೪), ಸಾಧುಗಳು (೫), ಅರ್ಹತ್ಸಿದ್ಧಾಚಾರ್ಯೋಪಾಧ್ಯಾಯಾಖ್ಯ ಸರ್ವಸಾಧುಗಳು (೬), ಜಿನೇಶ್ವರ (೭), ವಾಗ್ವನಿತೆ (೮),

---

10. ಈ ಅರ್ಥವನ್ನು ನೋಡಿದರೆ ಮ|| ಆಚಾರ್ಯರು ಈ ಪದ್ಯಕ್ಕೆ ಸರಿಯಾಗಿ ಅನ್ವಯಮಾಡಿಕೊಂಡಿರುವಂತೆ ಕಾಣುವುದಿಲ್ಲ. ಈ ಪದ್ಯಕ್ಕೆ "ಕವಿಶ್ರೇಷ್ಠರೊಳ್ ಜನನಾಥಂ ಜಗದೇಕನಲ್ಲಿ ಆ ನಾಗವರ್ಮಂ ಕಟಕೋಪಾಧ್ಯಾಯಂ, ಇಂದು ನೃಸಿಂಹಕ್ಷಿತಿಪಾಲನಲ್ಲಿ ಕಟಕೋಪಾಧ್ಯಾಯನಾರ್? ಇದಾನೀಂತನ ಶರ್ವವರ್ಮನೆ ಗಡಂ ಜನ್ನಂಗುಪಾಧ್ಯಾಯಂ ನವೀನೋಜ್ವಳಬಾಣನಪ್ಪ ಸುಮನೋಬಾಣಂ' ಎಂಬ ಸೂಕ್ತಿ" ಎಂದು ಅನ್ವಯಮಾಡಬೇಕು. 'ಸೂಕ್ತಿ ನವೀನೋಜ್ವಳಬಾಣಂ' ಎಂಬುದು ಒಂದು ಸಮಸ್ತ ಪದವೆಂದು ಭಾವಿಸುವುದು ತಪ್ಪು.

ನಾನು ಮೇಲೆ ೧೩ –೧೩೩ ನೇ ಪುಟಗಳಲ್ಲಿ ಈ ಪದ್ಯದ ತಾತ್ಪರ್ಯವನ್ನು ಹೇಳುವಾಗ 'ಕವಿಶ್ರೇಷ್ಠರೊಳ್ ಆರೆಂಬ ಸೂಕ್ತಿ' ಎಂಬ ಪದಗಳ ಅರ್ಥವನ್ನು ಸೇರಿಸುವುದು ಅನವಶ್ಯಕವೆಂದು ತಿಳಿದು ಅದನ್ನು ತಾತ್ಪರ್ಯದಲ್ಲಿ ಸೇರಿಸಿಲ್ಲ.

11. ಈ ಮುಂದೆ ನಾನು ಹೇಳುವುದೆಲ್ಲಕ್ಕೂ ಮೈಸೂರು ಓರಿಯಂಟಲ್ ಲೈಬ್ರರಿಯಲ್ಲಿರುವ ಅನಂತನಾಥಪುರಾಣದ ಒಂದು ಹಸ್ತಲಿಖಿತ ಪುಸ್ತಕವು (ನಂಬರು ಬಿ. ೬೪) ಆಧಾರವಾಗಿರುವುದು. ಪದ್ಯ ಸಂಖ್ಯೆಗಳೂ ಮತ್ತು ಪದ್ಯಗಳೂ ಈ ಪುಸ್ತಕದಲ್ಲಿರುವಂತೆ ಕೊಡಲ್ಪಟ್ಟಿರುವುವು.

ಶಾಸನಯಕ್ಷಿ (೯), ಪಾತಾಳಯಕ್ಷ (೧೦), ಜೈನ ಶಾಸನ (೧೧), ಶ್ರುತಕೇವಲಿಗಳು (೧೨)—ಎಂಬ ಇಷ್ಟು ಜನರನ್ನು ಈ ಆಶ್ವಾಸದ ಮೊದಲನೇ ೧೨ ಪದ್ಯಗಳಲ್ಲಿ ಸ್ತುತಿಸಿ, ತದನಂತರ ಗೃಧ್ರಪಿಂಛಾದಿಗಳು (೧೩), ಭೂತಬಲಿಪುಷ್ಪದಂತರು (೧೪),..ಪೂಜ್ಯಪಾದ (೧೫), ಅಕಳಂಕ (೧೬), ಜಟಾಸಿಂಹನಂದ್ಯಾದಿಗಳು (೧೭), ಗುಣಚಂದ್ರ (೧೮), ಕನಕ ಚಂದ್ರ, ಮಾಧವಚಂದ್ರರು (೧೯–೨೦), ಗಂಡ ವಿಮುಕ್ತರಾಮಚಂದ್ರ ಮಲಧಾರಿ (೨೧–೨೫) ಎಂಬ ಜೈನಗುರುಗಳನ್ನು ೧೩–೨೫ ನೇ ಪದ್ಯ ಗಳಲ್ಲಿ ಸ್ತುತಿಸಿ, ೨೬–೩೨ನೇ ಪದ್ಯಗಳಲ್ಲಿ ತನ್ನ ಪತ್ನಿ ಲಕುಮಾದೇವಿಯ ಗುರ್ವಾವಳಿಯಲ್ಲಿ ಜಾವಳಿಗೆಯ ಮುನಿಚಂದ್ರ (೨೬–೨೭), ತಚ್ಛಿಷ್ಯ ಸಕಲಚಂದ್ರ, ಅವನ ಶಿಷ್ಯ ಮಾಧವಚಂದ್ರ ಮತ್ತು ಅವನ ಶಿಷ್ಯ ಬಾಲ ಚಂದ್ರ ಕವಿಕಂದರ್ಪರನ್ನು (೨೯–೩೨) ಹೊಗಳಿರುತ್ತಾನೆ.

ಆಮೇಲೆ ಬರುವ—

ಜನನಾಥಂ ಜಗದೇಕನಲ್ಲಿ ಕಟಕೋಪಾಧ್ಯಾಯನಾ ನಾಗವ ।
ರ್ಮನಿದಾನೀಂತನ ಶರ್ವವರ್ಮನೆ ಗಡಂ ಜನ್ನಂಗುಪಾಧ್ಯಾಯನಿಂ ।
ದು ನೃಸಿಂಹಕ್ಷಿತಿಪಾಲನಲ್ಲಿ ಕಟಕೋಪಾಧ್ಯಾಯನಾರೆಂಬ ಸೂ ।
ಕ್ತಿ ನವೀನೋಜ್ವಳಬಾಣನಪ್ಪ ಸುಮನೋಬಾಣಂ ಕವಿಶ್ರೇಷ್ಠರೊಳ್ ‖ ೩೩ ‖

ಎನಗನುಕೂಲಮಕ್ಕೆ ಗುಣವರ್ಮನ ಜಾಣ್ನುಡಿ ಪಂಪನಿಂಪು ಪೊ ।
ನ್ನನ ಬಗೆ ನಾಗವರ್ಮನ ಬಹುಜ್ಞತೆ ರನ್ನನ ಕಾಂತಿ ನಾಗಚಂ ।
ದ್ರನ ರಸಭಾವಮಗ್ಗಳನ ವಕ್ರತೆ ನೇಮಿಯ ದೇಸೆ ಪುಷ್ಪಬಾ ।
ಣನ ಮೃದುಬಂಧಮಾ ಕವಿಗಳಲ್ತೆ ಜಿನೇಂದ್ರ ಪುರಾಣ ಕರ್ತೃಗಳ್ ‖ ೩೪ ‖

ಅರಿದಿದು ಬಾಳಪಟ್ಟ ಪರಮಾಗಮಮಲ್ಲದೆ ಜಾರ ಚೋರ ವೀ ।
ರರ ಕಥೆಯಂತೆ ಬಾಯ್ಸವಿಯ ಮಾತುಗಳಂ ಬರೆಕೆಯ್ವ ಚರ್ಚೆಯ ।
ಲ್ಲರುಹನ ಮೂರ್ತಿಯಂತಿರೆ ನಿರಾಭರಣಂ ಮೆರೆಯಲ್ಕೆ ಪೇಳ್ವುದೆಂ ।
ಚರಿತ ಪುರಾಣಮಂ ಬರಿದೆ ಪೇಳ್ದಪೆನೆಂಬೊಡೆ ತಿದ್ದುವಪ್ಪುದೆ ‖ ೩೫ ‖

ಸಮುದಾಯಂ ನೆರೆಯಲ್ಕೆವೇಳ್ಪುದು ಕಥಾವಿಸ್ತಾರದೊಳ್ವರ್ಣನ ।
ಕ್ರಮಮೋ ಯಾರಮಾನಾಳ್ದೊಷಿಸವೇಳ್ಕುಂ ವೃತ್ತ ವೃತ್ತಕ್ಕೆ ಭಾ ।
ವಮೊಡಂಬಟ್ಟರೆ ವೇಳ್ಕುಮೊಂದೆತೆರನಾಯಾಸಕ್ರಮಂ ಕಾವ್ಯಮಂ ।
ಸಮೆವಂಗಂ ಸಮೆವಂಗಮುಜ್ವಳಿಪ ಸೂಚೀಯಾನಮಂ ಜನಮಂ ‖ ೩೬ ‖

ಸಹಜಂ ಪೇಳ್ವುದು ಮುಂದೆ ಪೇಳ್ವುದು ಪದವ್ಯುತ್ಪತ್ತಿ ಪೇಳ್ಕಂ ಬಲಂ!
ಬಹುಕಾವ್ಯಾನುಭವಂ ಕಳಾಪ್ರತಿಭೆ ಲೋಕಜ್ಞತ್ವವಾಪ್ತಾಗಮು।
ಸ್ಪೃಹೆಯಿಂದಿಂತಿದುವಿಲ್ಲದಿರ್ದ ಕವಿಗಳ್ ಕಾವ್ಯಂಗಳಂ ಮಾಡುವಾ।
ಗ್ರಹವಂ ಮಾಡಿದೊಡಾಗ್ರಹಂ ಪೊಡೆದವೊಲ್ ಬೆಂಡಾಗಿ ಬೀಳಾಗರೆ || ೩೭ ||

ಕವಿ ಸರಸಂ ವ್ಯುತ್ಪನ್ನಂ।
ವಿವಿಧ ಕಳಾಭಿಜ್ಞನಾಗಮಜ್ಞಂ ಬರೆದೋ।
ದುವ ಜಾಣನಾಗೆ ನಿರ್ವಹಿ।
ಸುವುದಾ ಕವಿ ಪೇಳ್ದ ಕಾವ್ಯಮಖಿಳ ಶ್ರವ್ಯಂ || ೩೮ ||

ಎಂಬ ಪದ್ಯಗಳಲ್ಲಿ ಜನ್ನನು ಸುಮನೋಬಾಣನನ್ನು ಹೊಗಳಿ (೩೩) ಗುಣವವರ್ಣಾದಿಗಳ ಜಾಣ್ನುಡಿಯೇ ಮೊದಲಾದ ಕಾವ್ಯ ಗುಣಗಳು ತನ್ನ ಕಾವ್ಯದಲ್ಲಿ ಉಂಟಾಗಲೆಂದು ಹಾರೈಸಿ (೩೪), ಅರುಹನ ಮೂರ್ತಿಯಂತೆ ನಿರಾಭರಣವಾಗಿ ಚರಿತಪುರಾಣವನ್ನು ಬರೆಯುತ್ತೇನೆಂದು ಪ್ರತಿಜ್ಞೆಮಾಡಿ (೩೫), ಸತ್ಕಾವ್ಯಗಳು ಹೀಗಿರಬೇಕೆಂದು ಹೇಳಿ (೩೬–೩೮), ಅಲ್ಲಿಂದ ಮುಂದೆ ಬರುವ ಪದ್ಯಗಳಲ್ಲಿ ದುರ್ಜನ ದುಷ್ಕವಿಗಳನ್ನು ದೂಷಿಸಿ (೩೯–೪೫), ತನ್ನನ್ನೂ[12] ತನ್ನ ಕಾವ್ಯವನ್ನೂ ಹೊಗಳಿಕೊಂಡು (೪೬–೫೯), ೬೩ ನೇ ಪದ್ಯದಲ್ಲಿ ಕಥಾವಸ್ತುವನ್ನು ಪ್ರಾರಂಭಿಸಿರುತ್ತಾನೆ. ಮೇಲೆ ಹೇಳಿದ ೩೩ನೆಯ ಪದ್ಯವನ್ನು ಬಿಟ್ಟರೆ ಈ ಗ್ರಂಥದ ಇನ್ನಾವ ಪದ್ಯದಲ್ಲಿಯೂ ಸುಮನೋಬಾಣನ ಪ್ರಸ್ತಾವವೇ ಇಲ್ಲ. ಈ ೩೩ ನೇ ಪದ್ಯದಲ್ಲಿ ಕೂಡ ಮ|| ಆಚಾರ್ಯರ ಅರ್ಥವನ್ನು ಅನುಸರಿಸಿದಲ್ಲಿ, 'ಸುಮನೋಬಾಣನು ಈಗ ನರಸಿಂಹರಾಜನಲ್ಲಿ ಕಟಕೋಪಾಧ್ಯಾಯನಾಗಿರುವನು' ಎಂದು ಹೇಳಲ್ಪಟ್ಟಿರುವುದೇ ಹೊರತು, ಅವನು ಜನ್ನನ ಉಪಾಧ್ಯಾಯನೆಂದಾಗಲಿ ಅಥವಾ ಇತರ

---

12. 'ಪರಮ ಶ್ರೀ ಜಿನಪಾದಪಲ್ಲವ ನಿತಾಂತಂ ನಿರ್ಮಳಂ ಜೈನ ಮಂ।
ದಿರ ನಿರ್ಮಾಣಧನಂ ವಿನೇಯನಿಧಿ ಗಂಗಾನಂದನಂ ಶೌಚ ಶಂ।
ಕರಪುತ್ರಂ ಕವಿ ಕಮ್ಮೆವಂಶನಧಿಕಜ್ಞಂ ಕಾಶ್ಯಪಂ . . . . . . . |'
ಎಂಬ ಪದ್ಯವು ಈ ಸಂದರ್ಭದಲ್ಲಿ ಗಮನಿಸಯದಾಗಿರುವುದು.

ವಿಧವಾದ ಸಂಬಂಧವುಳ್ಳವನೆಂದಾಗಲಿ ಹೇಳಲ್ಪಟ್ಟಿಲ್ಲ. ಹೀಗಿರುವಾಗ, ಜನ್ನನು ಆ ಕವಿಯ ಪ್ರಸ್ತಾವವನ್ನು ಮಾಡಿ ಈ ವಿಷಯವನ್ನು ಇಲ್ಲಿ ಹೇಳುವುದಕ್ಕೆ ಕಾರಣವೇನು?

೧–೩೨ ನೇ ಪದ್ಯಗಳಲ್ಲಿ ಜನ್ನನು ಜೈನ ಗುರುಗಳನ್ನು ಹೊಗಳಿರುವುದೂ, ೩೪ ಮುಂತಾದ ಪದ್ಯಗಳಲ್ಲಿ ಗುಣವರ್ಮಾದಿ ಕವಿಗಳ ಗುಣ ವಿಶೇಷಗಳು ತನಗೆ ಉಂಟಾಗಲಿ ಎಂದು ಮೊದಲಾದುದನ್ನು ಹೇಳಿರುವುದೂ, ೩೩ ನೇ ಪದ್ಯದಲ್ಲಿ (ಮ॥ ಆಚಾರ್ಯರ ಅಭಿಪ್ರಾಯದಲ್ಲಿ) ತನ್ನ ಉಪಾಧ್ಯಾಯನಾದ ನಾಗವರ್ಮನನ್ನು ಹೊಗಳಿರುವುದೂ ಸಂಗತವಾಗಿರುವುದು. ಈ ಪದ್ಯದ ಉತ್ತರಾರ್ಧದಲ್ಲಾದರೆ ಅವನು ಯಾವ ಪ್ರಸಕ್ತಿಯೂ ಇಲ್ಲದೆ ಪೂರ್ವಾಪರ ಸಂಬಂಧವಿಲ್ಲದೆ 'ಈಗ ನೃಸಿಂಹರಾಜನಲ್ಲಿ ಸುಮನೋಬಾಣನು ಕಟಕೋಪಾಧ್ಯಾಯನಾಗಿರುವನು' ಎಂದು ಹೇಳಿರುವ ಮಾತು 'ಟೋಕಿಯೋ ನಗರದಲ್ಲಿ ಯಮಗಾಟ ಎಂಬ ನಾಲ್ಕೂವರೆ ಅಡಿ ಎತ್ತರವುಳ್ಳ ಮನುಷ್ಯನಿರುವನು; ಅವನ ಗಡ್ಡವು ಆರೂವರೆ ಅಡಿ ಉದ್ದವಾಗಿರುವುದು' ಎಂದು ಮೊದಲಾಗಿ ನಾನು ಪ್ರಕೃತ ಸಂದರ್ಭದಲ್ಲಿ ಬರೆದರೆ ಎಷ್ಟು ಅಸಂಬದ್ಧವಾಗಿರುವುದೋ ಅಷ್ಟೇ ಅಸಂಬದ್ಧವಾಗಿರುವುದೆಂಬುದರಲ್ಲಿ ಸಂದೇಹವಿಲ್ಲ. ಜನ್ನನಂತಹ ಕವಿಯು ತನ್ನ ಕಾವ್ಯದ ಮಧ್ಯದಲ್ಲಿ ಅಸಂಬದ್ಧವಾದ ಮಾತುಗಳನ್ನು ಹೇಳಿರುವನೆಂಬುದು ಸುತರಾಂ ಅಸಂಭಾವ್ಯವಾಗಿರುವುದರಿಂದ ಮ॥ ಆಚಾರ್ಯರು ಈ ಪದ್ಯಕ್ಕೆ ಹೇಳಿರುವ ಅರ್ಥವು ತಪ್ಪೆಂಬುದೂ, 'ಜನ್ನಂಗುಪಾಧ್ಯಾಯಂ' ಎಂಬುದನ್ನು ನಾನು ಮೇಲೆ (ಪುಟ ೧೭೯ ಆದಿ) ಹೇಳಿರುವಂತೆ 'ಸುಮನೋಬಾಣಂ' ಎಂಬ ಪದದೊಡನೆ ಅನ್ವಯಿಸಬೇಕೆಂಬುದೂ ಸ್ಪಷ್ಟ. ಎಂದರೆ, ಜನ್ನನು ತನ್ನ ಉಪಾಧ್ಯಾಯನಾದ ಸುಮನೋಬಾಣನನ್ನು ಈ ಪದ್ಯದಲ್ಲಿ ಸ್ತುತಿಸಿರುವನೆಂದೂ, ಈ ಸಂದರ್ಭದಲ್ಲಿ ಅವನನ್ನು ಜಗದೇಕನಲ್ಲಿ ಕಟಕೋಪಾಧ್ಯಾಯನಾಗಿದ್ದ ನಾಗವರ್ಮನೊಡನೆ ಹೋಲಿಸಿರುವನೆಂದೂ ನಾವು ತಿಳಿಯಬೇಕು. ಹೀಗೆ ಅರ್ಥ ಮಾಡುವುದರಿಂದ, ೧–೩೨ ನೇ ಪದ್ಯಗಳ ಬಳಿಕ ಜನ್ನನು ಈ ಪದ್ಯವನ್ನು ಹೇಳುವುದು ಸಂಗತವಾಗಿಯೇ ಇರುವುದು.

ಅದಂತಿರಲಿ. ಮೇಲೆ ಹೇಳಿದ ಜನ್ನನ ಪದ್ಯಕ್ಕಲ್ಲದೆ ಮ॥ ಆಚಾರ್ಯರು ನನ್ನ ಲೇಖನದಲ್ಲಿರುವ ಹಲವು ವಾಕ್ಯಗಳಿಗೂ ತಪ್ಪಾಗಿ ಅರ್ಥಮಾಡಿರುವರು. ನಾನು ಹೇಳಿರುವ ಅರ್ಥದಲ್ಲಿ 'ಬಹಳ ಮುಖ್ಯವಾದ ಇಂದು ಎಂಬ ಪದದ ಅರ್ಥವೇ ಬಿಟ್ಟುಹೋಗಿದೆ' ಎಂದೂ, 'ಅಭಿನವ ಶರ್ವವರ್ಮನೂ ಜನ್ನನಿಗೆ ಉಪಾಧ್ಯಾಯನೂ ಅಭಿನವಬಾಣನೂ ಆದ ಸುಮನೋಬಾಣನು ನೃಸಿಂಹರಾಜನ ಕಟಕೋಪಾಧ್ಯಾಯನಾಗಿದ್ದನು' ಎಂದು ನಾನು ಹೇಳಿರುವೆನೆಂದೂ ಅವರು LII, LI ಪುಟಗಳಲ್ಲಿ ಬರೆದಿರುವುದನ್ನು ನೋಡಿದರೆ ಅವರು ನನ್ನ ಲೇಖನದಲ್ಲಿ ನಾನು ಬರೆದಿರುವ "**ಈಗ** ಚಕ್ರವರ್ತಿಯೂ, ಬಹು ಪ್ರತಾಪಶಾಲಿಯೂ, ಚೋಳರಾಜನಿಗಿಂತ ಬಲಶಾಲಿಯೂ, ಕವಿಗಳಿಗೆ ಆಶ್ರಯದಾತೃವೂ ಆದ ನರಸಿಂಹ ಹೊಯ್ಸಳನಲ್ಲಿ ನವೀನೋಜ್ವಲಬಾಣ ಎಂಬ ಬಿರುದಿನಿಂದಲೂ, ಇದಾನೀಂತನ ಶರ್ವವರ್ಮ ಎಂಬ ಬಿರುದಿನಿಂದಲೂ ಪ್ರಸಿದ್ಧನಾದ ಸುಮನೋಬಾಣನು ಕಟಕೋಪಾಧ್ಯಾಯನಾ**ಗಿರುವನು**" (ಪುಟ ೧೩೩) ಎಂಬ ವಾಕ್ಯಕ್ಕೂ, "'ಇದಾನೀಂತನ ಶರ್ವವರ್ಮ' ಎಂಬ ಪ್ರಕೃತ ಪದ್ಯದಲ್ಲಿರುವ ಪದಕ್ಕಾದರೆ ಈಗಿನ ಕಾಲದ ಶರ್ವವರ್ಮನೆಂದರ್ಥವೇ ಹೊರತು ಹೊಸ ಶರ್ವವರ್ಮನೆಂದರ್ಥವಲ್ಲ" (ಪುಟ ೧೨೯) ಎಂಬ ವಾಕ್ಯಕ್ಕೂ ಸರಿಯಾಗಿ ಅರ್ಥಮಾಡಿಕೊಂಡಿರುವಂತಿಲ್ಲ.

ಹೀಗೆಯೇ ಮ॥ ಆಚಾರ್ಯರು LVIII ಪುಟದಲ್ಲಿ ಬರೆದಿರುವ 'ಅಯ್ಯನವರು ಈಚೆಗೆ ಬಂದ ಚಾವುಂಡರಾಯರುಗಳಿಗೂ ರಾಯ ಎಂಬ ಬಿರುದುಂಟು ಎಂದು ವಾದಿಸುತ್ತಾರೆ (ಪುಟ ೧೬೯)' ಎಂಬ ವಾಕ್ಯವೂ, LXI ಪುಟದಲ್ಲಿ ಬರೆದಿರುವ 'ಅಯ್ಯನವರು ವಿಜಯಾದಿತ್ಯನಿಗೆ ತಮ್ಮಂದಿರಿಲ್ಲ, ಲಕ್ಷ್ಮಣನು ರಾಜವಂಶಕ್ಕೆ ಸೇರಿದವನಲ್ಲ ಎನ್ನುತ್ತಾರೆ (ಪುಟ ೭೮)' ಎಂಬ ವಾಕ್ಯವೂ, LXIX ಪುಟದಲ್ಲಿ ಬರೆದಿರುವ "ಅಯ್ಯನವರು ಈ ಹೇಳಿಕೆಗೆ ಆಧಾರವಾಗಿ 'ಬಸವನ ಸತ್ತಿಗೆ ಶಾಸನ ಪ್ರಮಾಣವಿಲ್ಲದುದರಿಂದ ವೀರಶೈವ ಮತಸ್ಥಾಪಕನು ಬಹುಶಃ ಏಕಾಂತದ ರಾಮಯ್ಯನಾಗಿರಬಹುದು, ಬಸವನಲ್ಲ' ಎಂದು ಡಾಕ್ಟರ್ ಫ್ಲೀಟ್

ಬರೆದಿರುವುದನ್ನು ಅನುವಾದಮಾಡಿದ್ದಾರೆ. ವ್ಯಕ್ತಿಗಳ ಸತ್ತೆಗೆ ಶಾಸನವೇ ಪ್ರಮಾಣವಾದ ಪಕ್ಷದಲ್ಲಿ ಶಾಸನೋಕ್ತರಲ್ಲದ ಶಂಕರಾಚಾರ್ಯ ರಾಮಾನುಜಾಚಾರ್ಯಾದಿಗಳ ಸತ್ತೆಯನ್ನು ಹೇಗೆ ನಂಬುವುದು?" ಎಂಬ ವಾಕ್ಯವೂ ನನ್ನ ಲೇಖನದ ೧೬೯–೧೭೧ ನೇ ಪುಟಗಳಲ್ಲಿಯೂ, ೭೮–೮೨ ನೇ ಪುಟಗಳಲ್ಲಿಯೂ ಮತ್ತು ೨೭೩–೨೭೬ ನೇ ಪುಟಗಳಲ್ಲಿಯೂ ನಾನು ಬರೆದಿರುವ ವಾಕ್ಯಗಳ ಮತ್ತು ೨೭೬ ನೇ ಪುಟದಲ್ಲಿ ನಾನು ಉದ್ಧರಿಸಿರುವ ಡಾ|| ಫ್ಲೀಟ್‌ರವರ ವಾಕ್ಯಗಳ ಅರ್ಥವನ್ನು ಮ|| ಆಚಾರ್ಯರು ಸರಿಯಾಗಿ ಗ್ರಹಿಸಿಲ್ಲವೆಂಬುದನ್ನು ವ್ಯಕ್ತಪಡಿಸುವುದು. ಉಕ್ತ ೧೬೯–೧೭೧ ನೇ ಪುಟಗಳಲ್ಲಿ ನಾನು 'ರಾಯ' ಎಂಬುದು ಬಿರುದಲ್ಲವೆಂಬುದನ್ನೂ, ಅದು ಚಾಮುಂಡರಾಯ ಎಂಬ ಹೆಸರಿಗೆ 'ವಿನಾಪಿ ಪ್ರತ್ಯಯಂ ಪೂರ್ವೋತ್ತರ ಪದಯೋರ್ವಾ ಲೋಪೋ ವಾಚ್ಯಃ' ಎಂಬ ವಾರ್ತಿಕಕ್ಕನುಸಾರವಾಗಿ ಪೂರ್ವಪದ ಲೋಪವಾದಮೇಲೆ ಉಳಿದಿರುವ ಉತ್ತರ ಪದವೆಂಬುದನ್ನೂ ಸ್ಪಷ್ಟವಾಗಿ ನಿರೂಪಿಸಿರುವೆನು. ೭೮–೮೨ ನೇ ಪುಟಗಳಲ್ಲಿ ಲಕ್ಷ್ಮಣ, ಶಾಂತ, ವರ್ಧಮಾನರೆಂಬ ತಮ್ಮಂದಿರು ವಿಜಯಾದಿತ್ಯನಿಗೆ ಇರಲಿಲ್ಲವೆಂದೂ, ವಿಜಯಾದಿತ್ಯನ ಬಳಿಕ ಎರಡನೆಯ ಭೋಜದೇವನು ರಾಜ್ಯವಾಳಿದನೇ ಹೊರತು ಲಕ್ಷ್ಮಣನು ರಾಜ್ಯವಾಳಲಿಲ್ಲವೆಂದೂ, ಇಷ್ಟು ಮಾತ್ರ ನಾನು ಹೇಳಿರುವೆನೇ ಹೊರತು 'ವಿಜಯಾದಿತ್ಯನಿಗೆ ತಮ್ಮಂದಿರಿಲ್ಲ' ಎಂದಾಗಲಿ, 'ಲಕ್ಷ್ಮಣನು ರಾಜವಂಶಕ್ಕೆ ಸೇರಿದವನಲ್ಲ' ಎಂದಾಗಲಿ[13] ಹೇಳಿಲ್ಲ.

---

13. ವಸ್ತುತಃ 'ಈ ಲಕ್ಷ್ಮಣನು ರಾಜವಂಶಕ್ಕೆ ಸೇರಿದವನು' ಎಂಬ ಮ|| ಆಚಾರ್ಯರ ಅಭಿಪ್ರಾಯವು ನಿರಾಧಾರವಾದುದೆಂದು ನನಗೆ ತೋರುತ್ತದೆ. ಮೇಲೆ ೮೦ ನೇ ಪುಟದಲ್ಲಿ ನಾನು ಅನುವದಿಸಿರುವ ೨೭ ನೇ ಪದ್ಯದಲ್ಲಿರುವ 'ಅಸ್ತಪಾದಾರ ಚೂಡಾಮಣಿ ಪ್ರಸ್ಫುರತೇಜೋ ರೂಪನಾರಾಯಣ ನಯನಂ' ಎಂಬ ಪದದಿಂದ ಗಂಡರಾದಿತ್ಯನಿಗಿದ್ದ 'ರೂಪನಾರಾಯಣ' ಎಂಬ ಬಿರುದು ಈ ಲಕ್ಷ್ಮಣನಿಗೂ ಇತ್ತೆಂದು ಅವರು ಊಹಿಸಿ, ಆದ್ದರಿಂದ ಇವನೂ ರಾಜವಂಶಕ್ಕೆ ಸೇರಿದವನೆಂದು ನಿರ್ಧರಿಸಿದಾರೆ. 'ರೂಪನಾರಾಯಣ' ಎಂಬ ಬಿರುದು ಲಕ್ಷ್ಮಣನಿಗೆ ಇತ್ತೆಂದು ಈ ಮೇಲೆ ಹೇಳಿದ ಅಬದ್ಧವಾದ ಪದ್ಯದಿಂದ ನಿಷ್ಕೃಷ್ಟವಾಗಿ ತಿಳಿದುಬರುವುದಿಲ್ಲ. ಆ ಬಿರುದು ಒಂದುವೇಳೆ ಅವನಿಗೆ ಇದ್ದಿದ್ದರೂ ಕೂಡ ಅದರಿಂದ 'ಅವನು ರಾಜವಂಶಕ್ಕೆ ಸೇರಿದವನು' ಎಂದು ನಿರ್ಧರಿಸುವುದು ಸಾಧುವಾಗಿದೆಯೆಂದು ನನಗೆ ತೋರುವುದಿಲ್ಲ. 'ಸಮ್ಯಕ್ತ್ವ ಚೂಡಾಮಣಿ' ಎಂಬ ಬಿರುದು

ಹೀಗೆಯೇ ೨೭೪–೨೭೬ ನೇ ಪುಟಗಳಲ್ಲಿ ಬಸವನು ಬಿಜ್ಜಳನಿಗೆ ಮಂತ್ರಿಯಾಗಿದ್ದನೆಂಬ ಬಸವಪುರಾಣ, ಚೆನ್ನಬಸವಪುರಾಣ, ಬಿಜ್ಜಳರಾಯಚರಿತಾದಿ ಗ್ರಂಥಗಳ ಹೇಳಿಕೆಯಲ್ಲಿ ನಾನು ಸಂಶಯವನ್ನು ಉದ್ಭಾವಿಸಿರುವೆನೇ ಹೊರತು ಬಸವ, ಚೆನ್ನಬಸವಾದಿಗಳ ಸತ್ತೆಯ ವಿಷಯದಲ್ಲಿ ಸಂಶಯವನ್ನು ಉದ್ಭಾವಿಸಿಲ್ಲ. ಡಾ|| ಫ್ಲೀಟ್‍ರವರ ವಾಕ್ಯಗಳಲ್ಲಿ ಕೂಡ ಇಂತಹ ಸಂಶಯವು ಉದ್ಭಾವಿತವಾಗಿಲ್ಲ. ಆದ್ದರಿಂದ ಉಕ್ತ ಪುಟಗಳಲ್ಲಿ ನಾನು ಬರೆದಿರುವ ವಾಕ್ಯಗಳ ಮತ್ತು ನಾನು ಉದ್ಧರಿಸಿರುವ ಡಾ|| ಫ್ಲೀಟ್‍ರವರ ವಾಕ್ಯಗಳ ತಾತ್ಪರ್ಯವನ್ನು ಮ|| ಆಚಾರ್ಯರು ಸರಿಯಾಗಿ ಗ್ರಹಿಸಿಲ್ಲವೆಂಬ ವಿಷಯವು ಈ ಮೇಲೆ ಉದ್ಧರಿಸಿರುವ ಮ|| ಆಚಾರ್ಯರ ವಾಕ್ಯಗಳಿಂದ ನಿಸ್ಸಂದೇಹವಾಗಿರುವಂತೆ ಹೊರಪಡುವುದು.

## ಕರ್ಣಪಾರ್ಯ

ವಿಜಯಾದಿತ್ಯನ ತಂದೆಯಾದ ಗಂಡರಾದಿತ್ಯನಿಗೆ ಶ್ರೀಭೂಷಣ, ಗೋವರ್ಧನ, ಗೋಪಣ ಎಂಬ ಹೆಸರುಗಳೂ ಇದ್ದುವೆಂದು ನೇಮಿನಾಥ ಪುರಾಣದ ಆವುದೋ ಒಂದು ಹಸ್ತಲಿಖಿತ ಪುಸ್ತಕದಲ್ಲಿದ್ದಿತೆಂದು ಮ|| ಆಚಾರ್ಯರು ಬರೆದಿರುತ್ತಾರೆ (ಪುಟ LXI). ನಾವು ನೋಡಿದ ಹಸ್ತಲಿಖಿತ ಪುಸ್ತಕಗಳಲ್ಲಿ ಹೀಗೆಂದು ಹೇಳಲ್ಪಟ್ಟಿಲ್ಲವಾದುದರಿಂದ ಮ|| ಆಚಾರ್ಯರು ಹಿಂದೆ ನೋಡಿದ ಪುಸ್ತಕವು ದೊರೆಯುವವರೆಗೆ ಶ್ರೀಭೂಷಣ, ಗೋವರ್ಧನ, ಗೋಪಣ ಎಂಬ ಈ ಹೆಸರುಗಳು ಲಕ್ಷ್ಮಣ, ಶಾಂತ, ವರ್ಧಮಾನರ ತಂದೆಯ ಹೆಸರುಗಳೇ ಎಂದು ನಂಬುವುದು ಸದ್ಯಸ್ಕಾಲದಲ್ಲಿ ಉತ್ತಮಪಕ್ಷವಾಗಿರುವುದು. ಆದ್ದರಿಂದ ಈ ಪುರಾಣವು ಗಂಡರಾದಿತ್ಯನು ಜೀವಿಸಿದ್ದಾಗಲೇ ಬರೆಯಲ್ಪಟ್ಟಿರಬೇಕೆಂಬ ಮ|| ಆಚಾ

---

ಹೊಯ್ಸಳ ವಿಷ್ಣುವರ್ಧನನಿಗೆ ಇತ್ತೆಂದು ಅನೇಕ ಶಾಸನಗಳಿಂದ ತಿಳಿದುಬರುವುದು. ಬೇಲೂರು ೧೨೪ ನೇ ಶಾಸನದಲ್ಲಾದರೆ (೩೮ ನೇ ಪಂಕ್ತಿ) ಈ ಬಿರುದು ಅವನ ಸೇನಾಪತಿಯಾದ ಗಂಗರಾಜ–ದಂಡನಾಯಕನಿಗೆ ಹೇಳಲ್ಪಟ್ಟಿರುವುದು. ಹೀಗೆಯೇ ಚಾವುಂಡರಾಯಪುರಾಣದ ಕರ್ತೃವಾದ ಚಾಮುಂಡರಾಯನಿಗೆ ಇದ್ದ 'ವೀರಮಾರ್ತಂಡಂ' ಎಂಬ ಬಿರುದು ಅವನ ಸ್ವಾಮಿಯಾದ ರಾಚಮಲ್ಲನಿಗೂ ಇತ್ತೆಂದು ಶಾಸನಗಳಿಂದ ತಿಳಿದುಬರುವುದು ಗಂಗರಾಜನು ಹೊಯ್ಸಳವಂಶಕ್ಕೆ ಸೇರಿದವನೆಂದಾಗಲಿ ಚಾಮುಂಡರಾಯನು ಗಂಗವಂಶಕ್ಕೆ ಸೇರಿದವನೆಂದಾಗಲಿ ಈವರೆಗೆ ಯಾರು ಬರೆದಿರುವುದನ್ನೂ ನಾನು ನೋಡಿಲ್ಲ.

ರ್ಯರ ಅಭಿಪ್ರಾಯವು ನಿರಾಧಾರವಾದುದಾಗಿ ಪರಿಣಮಿಸುವುದು. ಅದು ವಸ್ತುತಃ ವಿಜಯಾದಿತ್ಯನ ಆಳಿಕೆಯಲ್ಲಿ ಬರೆಯಲ್ಪಟ್ಟಿತೆಂಬುದನ್ನು ನಾನು ಮೇಲೆ ೮೪ ನೇ ಪುಟದಲ್ಲಿ ವ್ಯಕ್ತಪಡಿಸಿರುವೆನು.

ಈ ವಿಜಯಾದಿತ್ಯನು ಯಾವ ವರ್ಷದಿಂದ ಯಾವ ವರ್ಷದವರೆಗೆ ಆಳುತ್ತಿದ್ದನೆಂಬುದು ನಮಗೆ ನಿಷ್ಕೃಷ್ಟವಾಗಿ ತಿಳಿದಿಲ್ಲ. ಇವನ ಹಿಂದೆ ಆಳುತ್ತಿದ್ದ ಇವನ ತಂದೆಯಾದ ಗಂಡರಾದಿತ್ಯನು ಕ್ರಿ. ಶ. ೧೧೩೫ರಲ್ಲಿ ಜೀವಿಸಿದ್ದನೆಂದೂ, ಇವನ ಬಳಿಕ ಪಟ್ಟಕ್ಕೆ ಬಂದ ಇವನ ಮಗನಾದ ಎರಡನೆಯ ಭೋಜದೇವನು ಕ್ರಿ. ಶ. ೧೧೯೦ರಲ್ಲಿ ರಾಜ್ಯವಾಳುತ್ತಿದ್ದನೆಂದೂ ನಮಗೆ ತಿಳಿದಿರುವುದರಿಂದ, ವಿಜಯಾದಿತ್ಯನು ಕ್ರಿ. ಶ. ೧೧೩೫–೧೧೯೦ರ ಮಧ್ಯೆ ಯಾವಾಗಲೋ ರಾಜ್ಯವಾಳಿದನೆಂಬುದು ಸ್ಪಷ್ಟ. ಇವನು ಕ್ರಿ. ಶ. ೧೧೪೩ರಿಂದ ೧೧೭೪ರ ವರೆಗೆ ರಾಜ್ಯವನ್ನಾಳುತ್ತಿದ್ದನೆಂದೂ, ಕರ್ಣಪಾರ್ಯನು ನೇಮಿನಾಥಪುರಾಣವನ್ನು ಕ್ರಿ. ಶ. ಸುಮಾರು ೧೧೭೩–೭೪ರಲ್ಲಿ ಬರೆದಿರಬಹುದೆಂದೂ ನಾವು ೮೫ ನೇ ಪುಟದಲ್ಲಿ ಹೇಳಿರುವುದು ಊಹಾಮಾತ್ರವೇ ಹೊರತು ನಿಷ್ಕೃಷ್ಟವಾದ ವಿಷಯವಲ್ಲ. ಆ ಪುರಾಣವು ಕ್ರಿ. ಶ. ೧೧೩೫–೧೧೯೦ರ ಮಧ್ಯದಲ್ಲಿ ಆವಾಗಲೋ ಬರೆಯಲ್ಪಟ್ಟಿತೆಂಬ ವಿಷಯದಲ್ಲಾದರೆ ಯಾವ ವಿಧವಾದ ಸಂದೇಹವೂ ಇಲ್ಲ.

## ಮ ಲ್ಲಿ ಕಾ ರ್ಜು ನ

ಮೇಲೆ ೧೮೫ ನೇ ಪುಟದಲ್ಲಿ ನಾನು ಮಲ್ಲಿಕಾರ್ಜುನ ಕೃತ ಸೂಕ್ತಿ ಸುಧಾರ್ಣವದ ಪೀಠಿಕಾಶ್ವಾಸದಿಂದ ಉದ್ಧರಿಸಿರುವ, 'ಹಣಿದಂ ಬೊಯ್ಯಲ್ ಜವಂ ರಾಯರನೆ ಬಯಸಿ ಬರ್ಪಂತೆ····' ಎಂಬ ಪದ್ಯವು ಮಲ್ಲಿಕಾರ್ಜುನ ಕೃತವಲ್ಲವೆಂದೂ, ಆ ಪದ್ಯವನ್ನು ಮಲ್ಲಿಕಾರ್ಜುನನು ಆವುದೋ ಗ್ರಂಥದಿಂದ ಉದ್ಧರಿಸಿ ಇಲ್ಲಿ ಸೇರಿಸಿರುವನೆಂದೂ ಮ॥ ಆಚಾರ್ಯರು ಹೇಳಿ (ಪುಟ ४८८) ಆ ಪದ್ಯದಲ್ಲಿರುವ 'ಎಲೆಲೆ ಮಹಾದೇವ' ಎಂಬ ಪದಗಳಿಗೆ, 'ಶಿವಶಿವಾ' ಎಂದು ಅರ್ಥವೆಂದೂ, 'ಎಲೈ ಮಹಾದೇವನೆ' ಎಂದು ನಾನು ಮಾಡಿರುವ ಅರ್ಥವು ತಪ್ಪೆಂದೂ LIX ಪುಟದಲ್ಲಿ ಬರೆದಿದ್ದಾರೆ.

ಈ ಎರಡು ಅಭಿಪ್ರಾಯಗಳಲ್ಲಿ ಆವುದೂ ಸಾಧುವಾಗಿರುವಂತಿಲ್ಲ. ಕ್ರಿ. ಶ. ೧೧೮೭ರಲ್ಲಿ ಭಿಲ್ಲಮನು ಪಟ್ಟಕ್ಕೆ ಬಂದು, ಚಾಲುಕ್ಯ ರಾಜ್ಯವು ಕೀರ್ತಿಶೇಷವಾದನಂತರ, ಸೇವುಣರಿಗೂ ಹೊಯ್ಸಳರಿಗೂ ಆಗಿಂದಾಗ್ಯೆ ಯುದ್ಧಗಳು ನಡೆಯುತ್ತಲೇ ಇದ್ದು ಸೇವುಣ ರಾಜರು ಹೊಯ್ಸಳರನ್ನು ಸೋಲಿಸಿದಂತೆ ತಮ್ಮ ಶಾಸನಗಳಲ್ಲಿಯೂ, ಹೊಯ್ಸಳ ರಾಜರು ಸೇವುಣ ರನ್ನು ಸೋಲಿಸಿದಂತೆ ತಮ್ಮ ಶಾಸನಗಳಲ್ಲಿಯೂ ಹೇಳಿಕೊಂಡಿರುತ್ತಾರೆ. (ಈ ವಿಷಯದಲ್ಲಿ ಡಾ|| ಫ್ಲೀಟ್‌ರವರ ಪೂರ್ವ ನಿರ್ದಿಷ್ಟ ಗ್ರಂಥವನ್ನೂ, ಎಪಿಗ್ರಾಫಿಯ ಇಂಡಿಕ ಪತ್ರಿಕೆಯ ೭ ಮತ್ತು ೮ ನೇ ಸಂಚಿಕೆಗಳ ಅನುಬಂಧಗಳನ್ನೂ ನೋಡಿ[14]. ಆದ್ದರಿಂದ ಹೊಯ್ಸಳ ರಾಜರಲ್ಲಿ ಒಬ್ಬೊಬ್ಬನಿಗೆ ಪಟ್ಟಾಭಿಷೇಕವಾದ ತರುಣದಲ್ಲಿಯೂ ಸೇವುಣ ರಾಜರು ಅವರೊಡನೆ ಕಾದಿದರೆಂಬುದರಲ್ಲಿಯೂ, ಹೀಗೆಯೇ ಸೇವುಣ ರಾಜರಲ್ಲಿ ಒಬ್ಬೊಬ್ಬನಿಗೆ ಪಟ್ಟಾಭಿಷೇಕವಾದ ತರುಣದಲ್ಲಿ ಅವರೊಡನೆ ಹೊಯ್ಸಳ ರಾಜರು ಕಾದಿದರೆಂಬುದರಲ್ಲಿಯೂ ಯಾವ ಸಂದೇಹವೂ ಇಲ್ಲ. ಮಹಾ ದೇವನಿಗೆ ಕ್ರಿ. ಶ. ೧೨೬೦-೬೧ರಲ್ಲಿ ಪಟ್ಟಾಭಿಷೇಕವಾದಾಗಲೂ ಕೂಡ ಸ್ವಲ್ಪಕಾಲದಲ್ಲಿಯೇ ಅವನ ಸೈನ್ಯಗಳಿಗೂ ಹೊಯ್ಸಳ ಸೈನ್ಯಗಳಿಗೂ ಹೀಗೆ ಯುದ್ಧಗಳಾದವೆಂಬುದರಲ್ಲಿಯೂ, ಇಂತಹ ಕೆಲವು ಕಾಳಗಗಳಲ್ಲಿ ಹೊಯ್ಸಳರು ಗೆದ್ದರೆಂಬುದರಲ್ಲಿಯೂ ಸಂದೇಹವಿಲ್ಲವಾದ್ದರಿಂದ, ಸೂಕ್ತಿ ಸುಧಾರ್ಣವದ ಪೀಠಿಕಾಶ್ವಾಸದಲ್ಲಿ ಸೋಮೇಶ್ವರನನ್ನು ವರ್ಣಿಸುವಾಗ ಅವನು ಸೇವುಣ ರಾಜನಾದ ಕೃಷ್ಣಕಂಧರನನ್ನು ಸೋಲಿಸಿದನೆಂದು ಹೇಳುವ—'ಮುನ್ನಂ ಬಿಡಿಯು ಕೃಷ್ಣಕಂಧರನುಮಂ....' ಎಂಬ ಪದ್ಯದ ಮುಂದೆ ಇರುವ 'ಹಣಿದಂ ಬೊಯ್ಸಲ್ ಜವಂ ರಾಯರನೆ ಬಯಸಿ ಬರ್ಪಂತೆ....' ಎಂಬ ಪದ್ಯದಲ್ಲಿನ 'ಎಲೆಲೆ ಮಹಾದೇವ' ಎಂಬ ಪದಗಳು ಕೃಷ್ಣಕಂಧರನ ತಮ್ಮನಾದ ಮಹಾದೇವನನ್ನು ಸಂಬೋಧಿಸಿ ಹೇಳಲ್ಪಟ್ಟಿರುವುವೆಂಬುದು ಸ್ಪಷ್ಟ. ಇಂತಹ ಸಂದರ್ಭದಲ್ಲಿ ಆ ಪದಗಳಿಗೆ

---

14. ಅಲ್ಲದೆ, ಹೇಮಾದ್ರಿಯ ವ್ರತಖಂಡದಲ್ಲಿ ಮಹಾದೇವನನ್ನು ಹೊಗಳುವ ಒಂದು ಶ್ಲೋಕದಲ್ಲಿರುವ 'ಕರ್ಣಾಟಲಾಟೋದ್ಭಟ ಕ್ಷೋಣೀಪಾಲ ವಿಡಂಬನಃ' ಎಂಬ ವಿಶೇಷಣ ವನ್ನೂ ನೋಡಿ.

'ಶಿವಶಿವಾ' ಎಂದು ಅರ್ಥಮಾಡುವುದು ಸುತರಾಂ ಅಸಮಂಜಸವಾಗಿರುವುದು.

ಹೀಗೆ ಸೂಕ್ತಿಸುಧಾರ್ಣವವು ಮಹಾದೇವನಿಗೆ ಪಟ್ಟಾಭಿಷೇಕವಾದನಂತರ ಬರೆಯಲ್ಪಟ್ಟಿರುವುದರಿಂದ, ಅದು ಕ್ರಿ. ಶ. ಸುಮಾರು ೧೨೬೩ರಲ್ಲಿ ಬರೆಯಲ್ಪಟ್ಟಿರಬಹುದೆಂಬ ನನ್ನ ಊಹೆಯು ಅಸಂಗತವಾಗಿಲ್ಲವೆಂಬುದು ಸ್ಪಷ್ಟ.

ಸೂಕ್ತಿಸುಧಾರ್ಣವವು 'ಸಮಸ್ತ ಭುವನಾನಂದ ಸರಸ್ವತೀ ಸರ್ವಾಂಗ ದರ್ಪಣಾಯಮಾನ ಪ್ರತಿಭಾನ ನೂತನ ಪುರಾತನ ಪ್ರಮಾಣ ಕವಿಪುಂಗವ ಪ್ರಣೀತ ಮಹಾಪ್ರಬಂಧ ಸಾರೋದ್ಧಾರ'ವಾಗಿದೆಯೆಂದು ಪ್ರತಿ ಒಂದು ಆಶ್ವಾಸದ ಅಂತ್ಯದಲ್ಲಿರುವ ಗದ್ಯದಿಂದ ತಿಳಿದುಬರುವುದಾದರೂ ಈ ಗ್ರಂಥದಲ್ಲಿರುವ—

> ಸರಸ ಕವೀಶ್ವರ ಸಭೆಯೊಳ್ | ಸರಸ ಕವೀಶಂ ವಿಶಿಷ್ಟ ಮುನಿಗಳ ಸಭೆಯೊಳ್ |
> ಪರಮಮುನಿ ಬುಧರ ಸಭೆಯೊಳ್ | ಪರಮ ಬುಧನೆನಿಪ್ಪನೀ ಚಿದಾನಂದ ಬುಧಂ ||
> ಪದವಿನ್ಯಾಸದ ದೇಸಿ ಮಾರ್ಗದ ವಿಲಾಸಂ ರೂಢಿವೆತ್ತಂಗಹಾ |
> ರವಲಂಕಾರದ ಬಂಧಭಾವವೆಸಕಂ ಮೆಲ್ಪಾಡಿನೊಳ್ ಬಂದು ಕೂ |
> ಡಿದ ನಾನಾರಸ ಸಾರದಾನಮೆಸೆದತ್ತೆಂದೊಲ್ದು ಕೆಯ್ಕೊಂಡು ಮೆ |
> ಚ್ಚಿದನಾ ಸೂಕ್ತಿಸುಧಾರ್ಣವಾಢ್ಯ ಕೃತಿಪಾತ್ರಶ್ರೀಗೆ ಸೋಮೇಶ್ವರಂ ||

ಎಂದು ಮೊದಲಾದ ಪದ್ಯಗಳು ಮಲ್ಲಿಕಾರ್ಜುನ ರಚಿತವಾದ.ವೆಂಬುದರಲ್ಲಿ ಸಂದೇಹವಿಲ್ಲವಾದ್ದರಿಂದ ಅವನು ಸ್ವಕೃತವಾದ ಪದ್ಯಗಳನ್ನೂ ಈ ಗ್ರಂಥದಲ್ಲಿ ಸೇರಿಸಿರುವನೆಂಬುದು ಸ್ಪಷ್ಟ. ವಸ್ತುತಃ ಪೀಠಿಕಾಶ್ವಾಸದಲ್ಲಿರುವ ಪದ್ಯಗಳೆಲ್ಲವನ್ನೂ ಇವನೇ ಬರೆದಿರಬಹುದೆಂದು ತೋರುತ್ತದೆ. ಈ ಊಹೆಯು ನಿಜವಾಗಿದ್ದ ಪಕ್ಷದಲ್ಲಿ ಈ ಗ್ರಂಥದ ಪೀಠಿಕಾಶ್ವಾಸದಲ್ಲಿರುವ 'ಮುನ್ನಂ ಬೋಧಿಯು ಕೃಷ್ಣಕಂಧರನುಮಂ....' ಎಂಬ ಪದ್ಯವನ್ನು ಇವನೇ ರಚಿಸಿರಬೇಕೆಂದಾಗುವುದರಿಂದ ಆ ಪದ್ಯವನ್ನು ರಚಿಸಿದ ಚಿದಾನಂದನು (ಮೇಲೆ ೧೮೭ನೇ ಪುಟವನ್ನು ನೋಡಿ) ಸೂಕ್ತಿಸುಧಾರ್ಣವದ ಕರ್ತೃವಾದ ಚಿದಾನಂದ–ಮಲ್ಲಿಕಾರ್ಜುನನಿಂದ ಅಭಿನ್ನನೆಂದು ಸಿದ್ಧವಾಗುವುದು.

ಈ ಊಹೆಯು ಒಂದುವೇಳೆ ತಪ್ಪಾದಾಗ್ಯೂ, ಆ ಆಶ್ವಾಸದಲ್ಲಿರುವ ಸೋಮೇಶ್ವರ ಸ್ತುತಿರೂಪವಾದ ಪದ್ಯಗಳು ಮಲ್ಲಿಕಾರ್ಜುನ ರಚಿತವಾದವುಗಳೆಂಬುದರಲ್ಲಿ ಯಾವ ಸಂದೇಹವೂ ಇಲ್ಲ. 'ಸರಸ ಕವೀಶ್ವರ ಸಭೆಯೊಳ್ ಸರಸಕವೀಶಂ' ಎಂದು ತನ್ನನ್ನು ಹೊಗಳಿಕೊಂಡಿರುವಂಥ ಮಲ್ಲಿಕಾರ್ಜುನನು ತನ್ನ ಸ್ವಾಮಿಯಾದ ಸೋಮೇಶ್ವರನನ್ನು ವರ್ಣಿಸುವಾಗ ಕೂಡ ಇತರ ಕವಿ ಕೃತವಾದ, ತತ್ರಾಪಿ ಬಸರಾಳು ಶಾಸನದ ಕರ್ತೃವಾದ ಚಿದಾನಂದನಿಂದ ರಚಿತವಾದ, ಪದ್ಯಗಳನ್ನು ಅನುವದಿಸಿರುವನೆಂಬುದು ಸುತರಾಂ ಅಸಂಭಾವನೀಯವಾಗಿರುವುದು.

ಸೂಕ್ತಿಸುಧಾರ್ಣವದಲ್ಲಿರುವ ಪದ್ಯಗಳೆಲ್ಲವನ್ನೂ 'ನೂತನ ಪುರಾತನ ಪ್ರಮಾಣ ಕವಿಪುಂಗವ ಪ್ರಣೀತ ಮಹಾಪ್ರಬಂಧ'ಗಳಿಂದ ಉದ್ಧರಿಸಿ ಸಂಯೋಜಿಸಿರುವೆನೆಂದು ಮಲ್ಲಿಕಾರ್ಜುನನು ಹೇಳಿಕೊಂಡಿರುವನಷ್ಟೆ. ಉಕ್ತ ಬಸರಾಳಿನ ಶಾಸನವು ಇಂತಹ ಮಹಾಪ್ರಬಂಧವಲ್ಲವೆಂಬುದು ಸ್ಪಷ್ಟ. ಅದರ ಕರ್ತೃವಾದ ಚಿದಾನಂದನೂ ಕೂಡ (ಮ|| ಆಚಾರ್ಯರ ಅಭಿಪ್ರಾಯವನ್ನು ಅನುಸರಿಸಿದಲ್ಲಿ) ನೂತನ ಪುರಾತನ ಪ್ರಮಾಣ ಕವಿಪುಂಗವರಲ್ಲಿ ಒಬ್ಬನಲ್ಲವೆಂಬುದೂ ಸ್ಪಷ್ಟ; ಏಕೆಂದರೆ ಬಸರಾಳಿನ ಶಾಸನವನ್ನು ಬಿಟ್ಟರೆ ಇತರ ಯಾವ ಶಾಸನವನ್ನೂ ಅಥವಾ ಗ್ರಂಥವನ್ನೂ ಈ ಕವಿಯು ಬರೆದಿರುವಂತೆ ಕಾಣುವುದಿಲ್ಲ.[15] ಇಂತಹ ಕವಿಯು ಬರೆದ ಶಾಸನದಲ್ಲಿನ ಪದ್ಯವನ್ನು ಮಲ್ಲಿಕಾರ್ಜುನನು ಅನುವದಿಸಿ (ತಾನು ಮಾಡಿರುವ ಪ್ರತಿಜ್ಞೆಗೆ ವಿರೋಧವಾಗಿ ನಡೆದುಕೊಂಡಿ)ರುವನೆಂದರೆ ಅದು ಆಶ್ಚರ್ಯವಲ್ಲವೆ? ಇಷ್ಟರಮೇಲೆ, ಬಸರಾಳಿನ ಶಾಸನದ ಪದ್ಯತಾನೆ ಮಲ್ಲಿಕಾರ್ಜುನನಿಗೆ ಹೇಗೆ ದೊರೆಯಿತು? ಈ ಕಾಲದಲ್ಲಿರುವಂತೆ, ಆವಾಗಲೂ ಕರ್ಣಾಟಕ ದೇಶದ ಶಾಸನಗಳನ್ನೆಲ್ಲಾ ಒಳಗೊಂಡಿದ್ದ ಪುಸ್ತಕಗಳು ದೊರೆಯುತ್ತಿದ್ದುವೆಂಬ ವಿಷಯದಲ್ಲಿ ನನಗೆ ಬಹಳ ಸಂದೇಹವಿರುವುದು. ಆದ್ದರಿಂದ ಇದನ್ನೆಲ್ಲಾ ಯೋಚಿ

---

15. ಈ ವಿಷಯದಲ್ಲಿ ಮ|| ಆಚಾರ್ಯರ ಕವಿಚರಿತೆಯೇ ಪ್ರಮಾಣವಾಗಿರುವುದು. ಆ ಗ್ರಂಥದ ಒಂದನೇ ಸಂಪುಟದಲ್ಲಿ ಬಸರಾಳಿನ ಶಾಸನ ಲೇಖಕನಾದ ಚಿದಾನಂದನನ್ನು ಬಿಟ್ಟರೆ ಬೇರೊಬ್ಬ ಯಾವ ಚಿದಾನಂದನ ಪ್ರಸ್ತಾವವೂ ಇಲ್ಲ.

ಸಿದರೆ ಗ್ರಂಥಕರ್ತೃವಾದ ಮಲ್ಲಿಕಾರ್ಜುನನು ಶಾಸನ ಲೇಖಕನಾದ ಚಿದಾನಂದನಿಂದ ಅಭಿನ್ನನೆಂದೂ, ಆದ್ದರಿಂದಲೇ ಉಕ್ತ ಶಾಸನದಲ್ಲಿ ತಾನು ಬರೆದ ಪದ್ಯಗಳನ್ನು ತನ್ನ ಗ್ರಂಥದಲ್ಲಿ ಸೇರಿಸಿದನೆಂದೂ ವ್ಯಕ್ತವಾಗುವುದಿಲ್ಲವೆ?

ಉಕ್ತ ಬಸರಾಳು ಶಾಸನವು ಸೋಮೇಶ್ವರನ ಆಳಿಕೆಯಲ್ಲಿ ಹುಟ್ಟಿತೆಂಬುದನ್ನು ನಾನು ಮೇಲೆ ೧೮೭ ನೇ ಪುಟದಲ್ಲಿ ವ್ಯಕ್ತಪಡಿಸಿರುವೆನು. ಈ ಶಾಸನದ ಕೊನೆಯಲ್ಲಿ "ಧರೆ ಪೊಗಳೆ ಚಿದಾನಂದಂ। ವಿರಚಿಸಿದಂ ಸತ್ಕವೀಶ್ವರಂ ಶಾಸನವಂ॥ ಪರಮ ಪ್ರಕಾಶ ಯೋಗೀ। ಶ್ವರತನಯಂ ಬ್ರಹ್ಮವಿದ್ಯೆಗಾಸ್ಪದ ರೂಪಂ॥" ಎಂಬ ಪದ್ಯವಿರುವುದರಿಂದ, ಸೋಮೇಶ್ವರನ ಆಳಿಕೆಯಲ್ಲಿ ಸತ್ಕವೀಶ್ವರನೂ, ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠನೂ ಆದ ಚಿದಾನಂದ ಎಂಬ ಹೆಸರುಳ್ಳ ಒಬ್ಬ ಮನುಷ್ಯನಿದ್ದನೆಂದು ನಾವು ತಿಳಿಯಬಹುದು. ಇದೇ ಸೋಮೇಶ್ವರನ ಆಳಿಕೆಯಲ್ಲಿ ಬರೆಯಲ್ಪಟ್ಟ ಸೂಕ್ತಿಸುಧಾರ್ಣವದಲ್ಲಿರುವ, 'ಸರಸಕವೀಶ್ವರ ಸಭೆಯೊಳ್। ಸರಸಕವೀಶಂ ವಿಶಿಷ್ಟ ಮುನಿಗಳ ಸಭೆಯೊಳ್। ಪರಮಮುನಿ....' ಎಂಬ ಪದ್ಯದಲ್ಲಿಯೂ ಸರಸಕವೀಶ್ವರನೂ, ಎಂದರೆ ಸತ್ಕವೀಶ್ವರನೂ, ಪರಮಮುನಿ, ಎಂದರೆ ಜ್ಞಾನಿಗಳಲ್ಲಿ ಶ್ರೇಷ್ಠನೂ ಆದ ಚಿದಾನಂದ ಎಂಬ ಹೆಸರುಳ್ಳ ಒಬ್ಬ ಮನುಷ್ಯನು ಸ್ತುತಿಸಲ್ಪಟ್ಟಿರುವನು. ಸತ್ಕವೀಶ್ವರರೂ, ಜ್ಞಾನಿಶ್ರೇಷ್ಠರೂ ಆದ ಚಿದಾನಂದ ಎಂಬ ಹೆಸರುಳ್ಳ ಇಬ್ಬರು ಮನುಷ್ಯರು ಸೋಮೇಶ್ವರನ ಆಳಿಕೆಯಲ್ಲಿ ಜೀವಿಸಿದ್ದರೆಂಬುದು ಅಸಂಭಾವನೀಯವಾದುದರಿಂದ, ಶಾಸನದಲ್ಲಿ ಹೇಳಲ್ಪಟ್ಟ ಚಿದಾನಂದನೂ, ಗ್ರಂಥದಲ್ಲಿ ಸ್ತುತನಾದ ಚಿದಾನಂದನೂ, ಎಂದರೆ, ಚಿದಾನಂದ–ಮಲ್ಲಿಕಾರ್ಜುನನೂ ಅಭಿನ್ನರೆಂದು ಇದರಿಂದಲೂ ಸ್ಪಷ್ಟವಾಗುವುದು.

ಈ ಮಲ್ಲಿಕಾರ್ಜುನನ ಮಗನಾದ ಕೇಶಿರಾಜನು ತನ್ನ ಶಬ್ದಮಣಿದರ್ಪಣದಲ್ಲಿ (ಸೂತ್ರ ೯) 'ಶಬ್ದದ್ರವ್ಯಂ ಶ್ವೇತಂ' ಎಂದು ಬರೆದಿರುವುದರಿಂದ ಇವನು ಜೈನನಾಗಿದ್ದಿರಬೇಕೆಂದು ಮ॥ ಆಚಾರ್ಯರು (ಪುಟ LIII) ನಿರ್ಧರಿಸಿರುವುದು ಸಾಧುವಾಗಿದೆಯೆಂದು ನನಗೆ ತೋರುವುದಿಲ್ಲ. ಶಬ್ದವು ಗುಣವೆಂದು ನ್ಯಾಯ–ವೈಶೇಷಿಕ ಶಾಸ್ತ್ರಗಳ ಮತ;

ಅದು ದ್ರವ್ಯವೆಂದೂ ಶ್ವೇತವರ್ಣವುಳ್ಳದ್ದೆಂದೂ ಜೈನ ಗ್ರಂಥಗಳಲ್ಲಿ ಮಾತ್ರ ಹೇಳಲ್ಪಟ್ಟಿರುವುದು. ಕೇಶಿರಾಜನು 'ಶಬ್ದದ್ರವ್ಯಂ ಶ್ವೇತಂ' ಎಂದು ಹೇಳಿರುವುದರಿಂದ ಅವನು ನ್ಯಾಯ-ವೈಶೇಷಿಕ ಶಾಸ್ತ್ರದಲ್ಲಿರುವುದನ್ನು ನಿರಾಕರಿಸಿ ಜೈನಗ್ರಂಥಗಳಲ್ಲಿ ಹೇಳಲ್ಪಟ್ಟಿರುವುದನ್ನು ಆದರಿಸಿದನೆಂದಷ್ಟು ಮಾತ್ರ ನಾವು ನಿರ್ಧರಿಸಬಹುದೇ ಹೊರತು, ಅವನು ಜೈನನಾಗಿದ್ದನೆಂದು, ಎಂದರೆ ವೈದಿಕಧರ್ಮಾನುಯಾಯಿಯಾಗಿ ಇರಲಿಲ್ಲವೆಂದು ಇದರಿಂದ ನಿರ್ಧರಿಸುವುದು ತಪ್ಪು.

ಪಂಚತಂತ್ರದ ೧೧ ನೇ ಪದ್ಯದಲ್ಲಿ ಅರ್ಥಶಾಸ್ತ್ರಪ್ರವೀಣರನ್ನು ಹೊಗಳುವಾಗ ದುರ್ಗಸಿಂಹನು ನಾಭೇಯನ ಹೆಸರನ್ನು ಮೊದಲು ಹೇಳಿ[16] ಬಳಿಕ ಬೃಹಸ್ಪತಿ, ಇಂದ್ರ, ಭೀಷ್ಮ, ಉದ್ಧವ, ಮನು, ವಿಶಾಲಾಕ್ಷ, ಇಭದಂತ, ಕುಬೇರ, ಅಜಾತಪ್ರಿಯಪುತ್ರರ ಹೆಸರನ್ನು ಹೇಳಿರುವನು. ಇವರಲ್ಲಿ ಇಂದ್ರ, ಬೃಹಸ್ಪತಿ, ವಿಶಾಲಾಕ್ಷರು ಅರ್ಥಶಾಸ್ತ್ರಗ್ರಂಥಗಳನ್ನು ರಚಿಸಿರುವರೆಂದು ಮಹಾಭಾರತ (೧೨, ೫೯, ೨೮ ಆದಿ) ದಲ್ಲಿಯೂ ಹೇಳಲ್ಪಟ್ಟಿರುವುದು. ನಾಭೇಯನು ಅರ್ಥಶಾಸ್ತ್ರವನ್ನು ಹೇಳಿದನೆಂಬ ವಿಷಯವು ಜೈನ ಗ್ರಂಥಗಳಲ್ಲಿ ಮಾತ್ರ ಹೇಳಲ್ಪಟ್ಟಿದೆಯೇ ಹೊರತು (ಹೇಮಚಂದ್ರನ ಲಘ್ವರ್ಹನ್ನೀತಿಸಾರದ ಆದಿಯನ್ನು ನೋಡಿ) ಕೌಟಿಲ್ಯ ಕಾಮಂದಕ್ಯಾದಿಗಳ ಅರ್ಥಶಾಸ್ತ್ರ ಗ್ರಂಥಗಳಲ್ಲಾಗಲಿ ಅಥವಾ ವೈದಿಕ ಮತದವರು ಬರೆದ ಇತರ ಗ್ರಂಥಗಳಲ್ಲಾಗಲಿ ಹೇಳಲ್ಪಟ್ಟಿಲ್ಲ. ಮ॥ ಆಚಾರ್ಯರ ಯುಕ್ತಿವಾದಕ್ಕನುಸಾರವಾಗಿ ನಾಭೇಯನ ಹೆಸರನ್ನು ಹೇಳುವ ದುರ್ಗಸಿಂಹನೂ ಜೈನನಾಗಿರಬೇಕಲ್ಲವೆ? ಇವನು ವಸ್ತುತಃ ಬ್ರಾಹ್ಮಣನಾಗಿದ್ದನೆಂದು ಅವನ ಪಂಚತಂತ್ರದಿಂದಲೇ ತಿಳಿದುಬರುವುದರಿಂದ 'ಶಬ್ದದ್ರವ್ಯವು ಶ್ವೇತವು', 'ಅರ್ಥಶಾಸ್ತ್ರವು ನಾಭೇಯನಿಂದ

---

16. ಹೀಗೆಯೇ ೬೧ ನೇ ಪುಟದಲ್ಲಿಯೂ ದುರ್ಗಸಿಂಹನು, ''' ನಹಿಂಸ್ಯಾತ್ಸರ್ವಭೂತಾನಿ' ಎಂದು ಅಕಳಕ ತರ್ಕಪ್ರತಿಷ್ಠಾಸಿದ್ಧಯ ಜೈನಸಿದ್ಧಾಂತ ವಾದಿಗಳುಂ, 'ಅಹಿಂಸಾ ಲಕ್ಷಣೋ ಧರ್ಮಃ' ಎಂಬ ವೈಶೇಷಿಕ ನೈಯಾಯಿಕ ಸಾಂಖ್ಯ ಮೀಮಾಂಸಕ ಷಟ್ತರ್ಕವಾದಿಗಳುಂ ' ಎಂಬ ವಾಕ್ಯದಲ್ಲಿಯೂ ಜೈನಮತ ಸಿದ್ಧಾಂತಕ್ಕೆ ಪ್ರಾಥಮ್ಯವನ್ನು ಕೊಟ್ಟಿರುತ್ತಾನೆ.

ಪ್ರೋಕ್ತವಾಯಿತು' ಎಂದು ಮೊದಲಾದ ಜೈನ ಗ್ರಂಥಗಳಲ್ಲಿ ಮಾತ್ರ ಹೇಳಲ್ಪಟ್ಟಿರುವ ವಿಷಯಗಳನ್ನು ತಮ್ಮ ಗ್ರಂಥಗಳಲ್ಲಿ ಹೇಳಿರುವಂತಹ ಗ್ರಂಥಕರ್ತೃಗಳು ಜೈನರಾಗಿದ್ದರೆಂದು ಬೇರೆ ಯಾವ ಆಧಾರವೂ ಇಲ್ಲದೆ ನಿರ್ಧರಿಸುವುದು ತಪ್ಪೆಂದು ಸ್ಪಷ್ಟವಾಗುವುದು.

## ಹರೀಶ್ವರಾದಿಗಳು

ಕ್ರಿ. ಶ. ೧೧೬೨ರಲ್ಲಿ ಕಾಕತೀಯ ವಂಶದ ಒಬ್ಬ ರುದ್ರದೇವನು ಆಳುತ್ತಿದ್ದಾಗ್ಯೂ ಇವನಿಗೆ ಪ್ರತಾಪರುದ್ರ ಎಂಬ ಹೆಸರು ಇರಲಿಲ್ಲ ವೆಂದೂ, ಇವನ ರಾಜಧಾನಿಯು ಅನ(ನು)ಮಕೊಂಡ ಎಂಬ ಊರಾಗಿತ್ತೇ ಹೊರತು ಓರಗಲ್ಲು ನಗರವಲ್ಲವೆಂದೂ ನಾನು ಮೇಲೆ (ಪುಟ ೨೬೩–೨೬೪) ಹೇಳಿರುವುದು ತಪ್ಪೆಂದು ಮ|| ಆಚಾರ್ಯರ ಅಭಿಪ್ರಾಯ. ಈ ವಿಷಯವನ್ನು ಕುರಿತು—

"೧೧೬೨ರಲ್ಲಿ ಪ್ರತಾಪರುದ್ರನೆಂಬ ಒಬ್ಬ ಕಾಕತೀಯ ರಾಜನಿದ್ದನು. ಇವನು ೧೧೪೦ರಿಂದ ೧೧೯೬ರ ವರೆಗೆ ಆಳಿದನು. ಈತನು ನೀತಿಸಾರವೆಂಬ ಒಂದು ತೆಲುಗು ಗ್ರಂಥವನ್ನು ಬರೆದನೆಂದೂ, ಓರಗಲ್ಲಿಗೆ ಹೋಗಿದ್ದನೆಂದೂ, ಅಲ್ಲಿ ಪಾಲ್ಕುರಿಕೆ ಸೋಮನಾಥನ ಬಸವಪುರಾಣವನ್ನು ಕೇಳಿದನೆಂದೂ, ಆಮೇಲೆ ಪಾಲ್ಕುರಿಕೆ ಸೋಮನಾಥನಿಗೆ ಒಂದಗ್ರಹಾರವನ್ನು ಕೊಟ್ಟನೆಂದೂ ತೆಲುಗು ಪಂಡಿತರು ಬರೆದಿದ್ದಾರೆ. (ವೀರೇಶಲಿಂಗಂ ಪಂತುಲು, ತೆಲುಗು ಕವಿಗಳು, I, *217–222*.) ಆ ಕಾಲದಲ್ಲಿ ಓರಗಲ್ಲು ರಾಜಧಾನಿಯಾಗಿರಲಿಲ್ಲ ಎಂಬುದಕ್ಕೆ ಅಯ್ಯನವರು ಆವ ಪ್ರಮಾಣವನ್ನೂ ತೋರಿಸಿಲ್ಲ. ರಾಜನಿಗೆ ತನ್ನ ರಾಜ್ಯದಲ್ಲಿ ಒಂದಕ್ಕಿಂತ ಹೆಚ್ಚಾದ ರಾಜಧಾನಿಗಳಿದ್ದಿರಬಹುದು. 'ತಸ್ಯಾಸ್ತೇನುಮಕೊಂಡನಾಮ ನಗರೀ ಶ್ರೀರಾಜಧಾನೀವ ಯಾ' ಎಂಬ ಶಾಸನ ಪದ್ಯದಲ್ಲಿ (ಪುಟ 263) ಅನುಮಕೊಂಡವು ರಾಜಧಾನಿಯ ಹಾಗಿದೆ (ರಾಜಧಾನೀವ) ಎಂಬುದರಿಂದ ರಾಜಧಾನಿ ಮತ್ತೊಂದು ಸ್ಥಳ ಎಂದು ಭಾಸವಾಗುತ್ತದೆ."

ಎಂದು ಅವರು LXVII ಪುಟದಲ್ಲಿ ಬರೆದಿದ್ದಾರೆ.

ಕ್ರಿ. ಶ. ೧೧೬೨ರಲ್ಲಿ ಆಳುತ್ತಿದ್ದ ಕಾಕತೀಯ ವಂಶದ ರುದ್ರದೇವನಿಗೆ ಪ್ರತಾಪರುದ್ರ ಎಂಬ ಹೆಸರೂ ಇತ್ತೆಂಬ ವಿಷಯದಲ್ಲಿ ಮ|| ಆಚಾರ್ಯರು ಶಾಸನಗಳ ಅಥವಾ ಇತಿಹಾಸ ಸಂಶೋಧಕರು ಬರೆದ ಲೇಖನಗಳ ಪ್ರಮಾಣವನ್ನು ಕೊಟ್ಟಿದ್ದರೆ ಚೆನ್ನಾಗಿರುತ್ತಿತ್ತು. ವೀರೇಶ

ಲಿಂಗಂ ಪಂತುಲು ಮುಂತಾದ ತೆಲುಗು ಪಂಡಿತರ ಲೇಖನಗಳು ಇಂತಹ ವಿಷಯಗಳಲ್ಲಿ ವಿಶ್ವಾಸಾರ್ಹವಾಗಿಲ್ಲ. ಈ ಕಾಕತೀಯ ರುದ್ರ ದೇವನು ಪಾಲ್ಕುರಿಕೆ ಸೋಮನಾಥನಿಗೆ ಅಗ್ರಹಾರವನ್ನು ಕೊಟ್ಟ ನೆಂಬ ಅವರ ಅಭಿಪ್ರಾಯವಂತೂ ಸರ್ವಥಾ ಅಸಂಭಾವನೀಯವಾಗಿರು ವುದು. ಈ ವಿಷಯವನ್ನು ಕುರಿತು ಮುಂದೆ ಸೋಮರಾಜನ ಜೀವನ ಕಾಲ ವಿಚಾರವನ್ನು ನೋಡಿ.

ನಾನು ಕಾಕತೀಯ ರಾಜರ ಹಲವು ಶಾಸನಗಳನ್ನು ನೋಡಿರು ವೆನು. ಇವುಗಳಲ್ಲೆಲ್ಲಾ ಕ್ರಿ. ಶ. ೧೧೬೨ರಲ್ಲಿದ್ದ ಈ ರುದ್ರದೇವನು (ಇವನು ಪ್ರೋಲರಾಜನ ಮತ್ತು ಮುಪ್ಪಮಾಂಬೆಯ ಮಗನು) 'ರುದ್ರ ದೇವ' ಎಂದು ವ್ಯವಹೃತನಾಗಿರುವನೇ ಹೊರತು 'ಪ್ರತಾಪರುದ್ರ' ಎಂಬ ಹೆಸರು ಇವನಿಗೆ ಎಲ್ಲಿಯೂ ಹೇಳಲ್ಪಟ್ಟಿಲ್ಲ. ಹೀಗೆಯೇ ಕ್ರಿ. ಶ. ೧೨೯೨–೧೩೩೫ರಲ್ಲಿ ಆಳುತ್ತಿದ್ದ ಇವನ ವಂಶಿಕನಾದ ಪ್ರತಾಪರುದ್ರನೂ ನಾನು ನೋಡಿದ ಎಲ್ಲಾ ಶಾಸನಗಳಲ್ಲಿಯೂ[17] 'ಪ್ರತಾಪರುದ್ರ' ಎಂದೇ ವ್ಯವಹರಿಸಲ್ಪಟ್ಟಿರುವನೇ ಹೊರತು, ಕೇವಲ 'ರುದ್ರ' ಎಂಬ ಹೆಸರಿನಿಂದ ಎಲ್ಲಿಯೂ ವ್ಯವಹರಿಸಲ್ಪಟ್ಟಿಲ್ಲ. 'ಪ್ರತಾಪರುದ್ರ ಯಶೋ ಭೂಷಣ'ವೆಂಬ ಅಲಂಕಾರ ಗ್ರಂಥದಲ್ಲಿ ಉದಾಹರಣ ರೂಪವಾಗಿ ಹೇಳಲ್ಪಟ್ಟಿರುವ ನಾಟಕದಲ್ಲಿಯೂ ಹೀಗೆಯೇ 'ಪ್ರತಾಪರುದ್ರ' ಎಂಬ ಹೆಸರೇ ಈ ರಾಜನ ವಿಷಯದಲ್ಲಿ ಹೇಳಲ್ಪಟ್ಟಿರುವುದು.[18] ಆದ್ದರಿಂದ

---

17. ಡಾ|| ಹುಲ್ಟ್ಷ್‌ರವರು ಇಂಡಿಯನ್ ಆಂಟಿಕ್ವೆರಿ ಪತ್ರಿಕೆಯಲ್ಲಿ (೨೧, ೨೦೦–೧) ಪ್ರಕಟಿಸಿರುವ ಈ ಪ್ರತಾಪರುದ್ರನ ಶಾಸನದ (ಈ ಶಾಸನವು ಜಂಬುಕೇಶ್ವರದಲ್ಲಿರುವುದು. ೧ನೇ ಪಂಕ್ತಿಯಲ್ಲಿ—'. . . . [ಮೇ]ಶ್ವರ ಕಾಕತೀಯ ಪ್ರತಾಪರುದ್ರದೇವ ಮಹಾ ರಾಜುಲು' ಎಂದು ಇರುವುದು. ಹೀಗೆಯೇ ಈಗಿನ ಮಧ್ಯಪ್ರಾಂತದಲ್ಲಿರುವ ದಂತೇವಾರಾ ಮೊದಲಾದ ಊರುಗಳಲ್ಲಿರುವ ಈತನ ವಂಶಿಕರ ಶಾಸನಗಳಲ್ಲಿಯೂ (ಈ ಶಾಸನಗಳು ಎಪಿ. ಇಂಡಿಕ ಪತ್ರಿಕೆಯಲ್ಲಿ ಪ್ರಕಟಿಸಲ್ಪಟ್ಟಿರುವುವು) ಈ ರಾಜನು 'ಓರುಗಲ್ಲಿನ ಪ್ರತಾಪರುದ್ರ' ಎಂದೇ ವ್ಯವಹರಿಸಲ್ಪಟ್ಟಿರುವನು.

18. ಈ ಗ್ರಂಥದ ಇತರ ಶ್ಲೋಕಗಳಲ್ಲಿಯೂ ಕೂಡ, ಛಂದೋನಿಯಮಕ್ಕೆ ಭಂಗ ವಿಲ್ಲದ ಕಡೆಗಳಲ್ಲಿ, ಈ ರಾಜನು ಪ್ರತಾಪರುದ್ರ ಎಂದೇ ಕರೆಯಲ್ಪಟ್ಟಿರುವನು, ಉದಾ· (೧; ೩, ೯, ೧೨) ಪ್ರತಾಪರುದ್ರದೇವಸ್ಯ ಕೀರ್ತಿರ್ಯೇನ ಪ್ರಕಾಶತೇ; ಪ್ರತಾಪರುದ್ರದೇವಸ್ಯ ಗುಣಾನಾಶ್ರಿತ್ಯ ನಿರ್ಮಿತಃ; ಪ್ರತಾಪರುದ್ರದೇವಸ್ಯ ಗುಣಾ ವಾಚಾಮಗೋಚರಾಃ.

ಪ್ರತಾಪರುದ್ರ ಎಂಬುದು ಕ್ರಿ. ಶ. ೧೧೬೨ರಲ್ಲಿ ಆಳುತ್ತಿದ್ದ ಮಹಾ ಮಂಡಲೇಶ್ವರ ರುದ್ರದೇವನ ಹೆಸರಲ್ಲವೆಂದೂ, ಅದು ಕ್ರಿ. ಶ. ೧೨೯೨–೧೩೩೫ರಲ್ಲಿ ಆಳುತ್ತಿದ್ದ ಮಹಾರಾಜನ ಹೆಸರೆಂದೂ ಮೇಲೆ ಹೇಳಿದುದರಿಂದ ಸ್ಪಷ್ಟವಾಗಿ ಹೊರಪಡುವುದು.

**'ತಸ್ಯಾಸ್ತೀನುಮಕೊಂಡನಾಮ ನಗರೀ ಶ್ರೀರಾಜಧಾನೀವ ಯಾ'**

ಎಂಬ ಚರಣಕ್ಕೆ 'ಅನುಮಕೊಂಡವು ರಾಜಧಾನಿಯ ಹಾಗಿದೆ' ಎಂದು ಮ॥ ಆಚಾರ್ಯರು ಮಾಡುವ ಅರ್ಥವು ತಪ್ಪಾದದ್ದು. 'ಲಕ್ಷ್ಮಿಯ ರಾಜ ಧಾನಿಯ ಹಾಗೆ ಇರುವಂಥ ಅನುಮಕೊಂಡ ನಗರವು ಅವನಿಗೆ (ರಾಜ ಧಾನಿಯಾಗಿ) ಇದೆ' ಎಂದು ಈ ಚರಣದ ಅರ್ಥವು. ಆದ್ದರಿಂದಲೇ ಡಾ॥ ಫ್ಲೀಟ್‌ರವರೂ ಕೂಡ ಇಂಡಿಯನ್ ಆಂಟಿಕ್ವೆರಿಯಲ್ಲಿ (೧೧; ಪುಟ ೧೦ ಆದಿ) ಅನುಮಕೊಂಡದ ಶಾಸನವನ್ನು ಪ್ರಕಟಿಸುವಾಗ ಮೇಲೆ ಹೇಳಿದ ಶ್ಲೋಕ ಚರಣವನ್ನು 'His (capital), the city named Anumakoṇḍa—which is as it were the capital of Śrī' ಎಂದು ಅನುವದಿಸಿರುವರು. ವಸ್ತುತಃ

**'ಶ್ರೀಮನ್ಮಹಾಮಂಡಲೇಶ್ವರ ಕಾಕತಿಯ ರುದ್ರದೇವರಾಜುಲ ವಿಜಯ ರಾಜ್ಯ ಮುತ್ತರೋತ್ತರಾಭಿವೃದ್ಧಿ ಪ್ರವರ್ಧಮಾನಮಾಚಂದ್ರಾರ್ಕತಾರ ಮನ್ಮಕೊಂಡ ಪಟ್ಟಣ ಮುನಂದು ಸುಖಸಂಕಥಾ ವಿನೋದಂಬುನ ರಾಜ್ಯಂಬು ಸೇಯುಚುನುಂಡ'**

ಎಂಬ ಈ ಶಾಸನದ ೩ನೇ ಪಂಕ್ತಿಯಲ್ಲಿ ಈ ಮಹಾಮಂಡಲೇಶ್ವರ ರುದ್ರದೇವನು ಅನುಮಕೊಂಡದಲ್ಲಿ ರಾಜ್ಯವಾಳುತ್ತಿದ್ದನೆಂದು ಸ್ಪಷ್ಟ ವಾಗಿ ಹೇಳಿರುವುದರಿಂದ ಆ ಕಾಲದಲ್ಲಿ, ಎಂದರೆ ಕ್ರಿ. ಶ. ೧೧೬೨ರಲ್ಲಿ ಆ ನಗರವು ಅವನ ರಾಜಧಾನಿಯಾಗಿತ್ತೆಂಬುದು ಸ್ಪಷ್ಟ.

'ರಾಜನಿಗೆ ತನ್ನ ರಾಜ್ಯದಲ್ಲಿ ಒಂದಕ್ಕಿಂತ ಹೆಚ್ಚಾದ ರಾಜಧಾನಿ ಗಳಿದ್ದಿರಬಹುದು' ಎಂಬ ಮ॥ ಆಚಾರ್ಯರ ಅಭಿಪ್ರಾಯವು ಬಹು ವಿಚಿತ್ರವಾದುದೆಂದು ನಮಗೆ ತೋರುವುದು. ಈಗಿನ ಕಾಲದಲ್ಲಿ ಮದ್ರಾಸು, ಬೊಂಬಾಯಿ ಮುಂತಾದ ಬ್ರಿಟಿಷ್ ಜನರ ರಾಜ್ಯಗಳಲ್ಲಿ ಮಾತ್ರ 'ಬೇಸಿಗೆ ಕಾಲದ ರಾಜಧಾನಿ', 'ಛಳಿಗಾಲದ ರಾಜಧಾನಿ' 'ಇತರ ಕಾಲದ ರಾಜಧಾನಿ' ಎಂದು ಎರಡು ಮೂರು ರಾಜಧಾನಿಗಳಿರು

ವುವೆಂದು ನಾವು ಕೇಳಿರುವೆವೇ ಹೊರತು, ಪೂರ್ವಕಾಲದಲ್ಲಿ ಹೀಗೆ ಒಂದು ರಾಜ್ಯಕ್ಕೆ ಒಂದಕ್ಕಿಂತ ಹೆಚ್ಚಾದ ರಾಜಧಾನಿಗಳು ನಮಗೆ ತಿಳಿದಂತೆ ಎಲ್ಲಿಯೂ ಇರಲಿಲ್ಲ.

ಹೀಗೆಯೇ 'ಆ ಕಾಲದಲ್ಲಿ ಓರಗಲ್ಲು ರಾಜಧಾನಿಯಾಗಿರಲಿಲ್ಲ ಎಂಬುದಕ್ಕೆ ಅಯ್ಯಂಗಾರರು ಆವ ಪ್ರಮಾಣವನ್ನೂ ತೋರಿಸಿಲ್ಲ' ಎಂಬ ಮ॥ ಆಚಾರ್ಯರ ಆಕ್ಷೇಪವೂ ಕೂಡ ಬಹು ವಿಚಿತ್ರವಾದುದಾಗಿರುವುದು. ಒಬ್ಬ ಮನುಷ್ಯನು ಒಂದು ಕಾಲದಲ್ಲಿ ಅಥವಾ ಒಂದು ಊರಿನಲ್ಲಿ ಜೀವಿಸಿದ್ದನು, ಒಂದು ಕೆಲಸವನ್ನು ಮಾಡಿದನು, ಇತ್ಯಾದಿ ವಿಷಯಗಳಲ್ಲಿ ನಾವು ಪ್ರಮಾಣಗಳನ್ನು ಉದಾಹರಿಸಬಹುದೇ ಹೊರತು ಅವನು ಒಂದು ಕಾಲದಲ್ಲಿ ಅಥವಾ ಒಂದು ಊರಿನಲ್ಲಿ ಜೀವಿಸಲಿಲ್ಲ. ಒಂದು ಕೆಲಸವನ್ನು ಮಾಡಲಿಲ್ಲ ಎಂದು ಮೊದಲಾದ ವಿಷಯಗಳಲ್ಲಿ ಪ್ರಮಾಣವನ್ನು ಉದಾಹರಿಸಲು ಹೇಗೆ ಸಾಧ್ಯವು? ಮಹಾಮಂಡಲೇಶ್ವರ ರುದ್ರದೇವನ ಕಾಲದಲ್ಲಿ ಅನುಮಕೊಂಡವು ರಾಜಧಾನಿಯಾಗಿತ್ತೆಂಬ ವಿಷಯದಲ್ಲಿ ಪ್ರಮಾಣವನ್ನು ಕೊಡುವುದು ಸಾಧ್ಯವು (ಮೇಲೆ ಕೊಡಲ್ಪಟ್ಟೂ ಇದೆ); ಆ ಕಾಲದಲ್ಲಿ ಓರುಗಲ್ಲು ರಾಜಧಾನಿಯಾಗಿರಲಿಲ್ಲವೆಂಬ ವಿಷಯದಲ್ಲಿ ಪ್ರಮಾಣವನ್ನು ಕೊಡಲು ಹೇಗೆ ಸಾಧ್ಯವಾದೀತು? ಆದಾಗ್ಯೂ ಇಂಡಿಯನ್ ಆಂಟಿಕ್ವೆರಿ ಪತ್ರಿಕೆಯ ೨೧ನೇ ಸಂಚಿಕೆಯಲ್ಲಿ (ಪುಟ ೧೯೮ ಆದಿ) ಪ್ರಕಟಿತವಾಗಿರುವ ಕಾಕತೀಯ ರಾಜನ ಒಂದು ಶಾಸನದಲ್ಲಿ ರುದ್ರುದೇವನ ಮತ್ತು ಓರುಗಲ್ಲಿನ ಹೆಸರುಗಳು ಹೇಳಲ್ಪಟ್ಟಿದ್ದಾಗ್ಯೂ ಆ ಪಟ್ಟಣವು ರಾಜಧಾನಿಯಾಗಿತ್ತೆಂದು ಹೇಳಲ್ಪಟ್ಟಿಲ್ಲವೆಂಬುದನ್ನು ನೋಡಿದರೆ ಅದು ಅವನ ರಾಜಧಾನಿಯಾಗಿರಲಿಲ್ಲವೆಂದು ನಾವು ಊಹಿಸಬಹುದಾಗಿರುವುದು.

ಆದ್ದರಿಂದ ರಾಘವಾಂಕ ಚಾರಿತ್ರ, ಭೈರವೇಶ್ವರ ಕಾವ್ಯದ ಕಥಾಸೂತ್ರರತ್ನಾಕರಗಳಲ್ಲಿ ರಾಘವಾಂಕನ ವಿಷಯವಾಗಿ 'ಅವನು ಓರುಗಲ್ಲಿಗೆ ಹೋಗಿ ಅಲ್ಲಿಯ ರಾಜನಾದ ಪ್ರತಾಪರುದ್ರನಿಂದ ಬಹುಮಾನವನ್ನು ಪಡೆದನು' ಎಂದು ಹೇಳಲ್ಪಟ್ಟಿರುವ ಕಥೆಯು ಮ॥ ಆಚಾರ್ಯರು ಹೇಳುವಂತೆ ವಿಶ್ವಾಸಾರ್ಹವಾಗಿದ್ದ ಪಕ್ಷದಲ್ಲಿ ರಾಘವಾಂಕನೂ, ಅವನ

ಮಾವ ಹರೀಶ್ವರನೂ ಕ್ರಿ. ಶ. ಸುಮಾರು ೧೨೦೦ರಲ್ಲಿದ್ದರೆಂದೂ, ಅವರು ಕ್ರಿ. ಶ. ಸುಮಾರು ೧೧೬೫ರಲ್ಲಿದ್ದರೆಂಬ ಮ|| ಆಚಾರ್ಯರ ಅಭಿಪ್ರಾಯವು ತಪ್ಪಾದುದೆಂದೂ ಸಿದ್ಧವಾಗುವುದು.

## ಸೋ ಮ ರಾ ಜ

ಕ್ರಿ. ಶ. ೧೫೭೨ರಲ್ಲಿ ಹುಟ್ಟಿದ ಹಾಸನದ ೧೧೭ನೇ ಶಾಸನದಲ್ಲಿ ಪ್ರಸ್ತುತನಾದ ಸೋಮವಂಶದ ತಿರುಮಲರಾಜನ ಕುಮಾರನಾದ ರಾಯು(ಣ) ಒಡೆಯರ ಕುಮಾರನಾದ ಇಂದುಶೇಖರ ರಾಜನು ಸೋಮ ರಾಜನಿಂದ ಉದ್ಭಟ ಕಾವ್ಯದಲ್ಲಿ ತನ್ನ ತಂದೆಯೆಂದು ಹೇಳಲ್ಪಟ್ಟಿರುವ ಚಂದ್ರವಂಶದ ತಿರುಮಲರಾಜನ ಮಗನಾದ ರಾಯಣರಾಜನ ಮಗನಾದ ಇಂದುಶೇಖರ ರಾಜನಿಂದ ಅಭಿನ್ನನೆಂಬ ನನ್ನ ಅಭಿಪ್ರಾಯವು ತಪ್ಪಾದು ದೆಂದು ಮ|| ಆಚಾರ್ಯರು ಹೇಳಿ (ಪುಟ LXII), ಈ ವಿಷಯದಲ್ಲಿ,

"ಸೋಮರಾಜನ ಗ್ರಂಥದಿಂದ ಅವನು ವೀರಶೈವನೆಂಬುದು ಸ್ಪಷ್ಟವಾಗಿದೆ. ನಾಮಸಾಮ್ಯವಿದ್ದರೂ ನುಗ್ಗೆಹಳ್ಳಿ ಪಾಳೆಯಗಾರರು ವೀರಶೈವರು ಬೇರೆ ಅಲ್ಲ: ಏಕೆಂದರೆ ಅವರಿಗೆ ಹಾಸನ ೧೧೭ರಲ್ಲಿ ಆತ್ರೇಯ ಗೋತ್ರವೂ, ಆಪಸ್ತಂಬ ಸೂತ್ರವೂ, ಯಜುಶ್ಶಾಖೆಯೂ ಹೇಳಿದೆ. ಅಲ್ಲದೆ ಹಾಸನ ೧೧೭ ಸೋಮರಾಜನ ಹೆಸರನ್ನು ಹೇಳು ವುದಿಲ್ಲ. ಪರಂತು ಇಂದುಶೇಖರನ ಮಗ ಬಸವರಾಜ ಎಂದು ಹೇಳಿ ಅವನ ಕಾಲವು 1573 ಎನ್ನುತ್ತದೆ" ಎಂದು LXIII ಪುಟದಲ್ಲಿ ಬರೆ ದಿದ್ದಾರೆ. ಆದರೆ ಚಂದ್ರವಂಶದ ತಿರುಮಲರಾಜನ ಮಗನಾದ ರಾಯು(ಣ) ರಾಜನ ಮಗನೂ, ಇಂದುಶೇಖರ ಎಂಬ ಹೆಸರುಳ್ಳವನೂ ಆದಂಥ ಇಬ್ಬರು ಮನುಷ್ಯರು ಕರ್ಣಾಟಕ ದೇಶದಲ್ಲಿದ್ದರೆಂಬುದು ಅಸಂಭಾವನೀಯವಾದ್ದರಿಂದ, ಶಾಸನದಲ್ಲಿ ಕೀರ್ತಿತನಾದ ಇಂದು ಶೇಖರನೂ ಉದ್ಭಟ ಕಾವ್ಯದಲ್ಲಿ ಕೀರ್ತಿತನಾದ ಇಂದುಶೇಖರನೂ ಒಬ್ಬನೇ ಮನುಷ್ಯನೆಂಬುದರಲ್ಲಿ ಸಂದೇಹವಿಲ್ಲ.

ಆತ್ರೇಯ ಗೋತ್ರ, ಆಪಸ್ತಂಬ ಸೂತ್ರ, ಯಜುಶ್ಶಾಖೆ ಮುಂತಾಗಿ ಗೋತ್ರ, ಸೂತ್ರ ವೇದಶಾಖೆಗಳನ್ನು ಹೇಳಿಕೊಳ್ಳತಕ್ಕಂಥ ರಾಜರು ವೀರಶೈವರಾಗಿರಲಾರರೆಂಬ ಮ|| ಆಚಾರ್ಯರ ಅಭಿಪ್ರಾಯವು ತಪ್ಪಾ

ದುದು. ಈ ವಿಷಯದಲ್ಲಿ ಮಡಕೆರೆಯಲ್ಲಿನ ಶಾಸನ (ಎಪಿ. ಕರ್ಣಾಟಿಕ, ೧೨, ಕೊಡಗು ೨೫ ನೇ ಶಾಸನ)ದ ೨–೮ ನೇ ಪಂಕ್ತಿಗಳಲ್ಲಿರುವ

'ಭರದ್ವಾಜ ಗೋತ್ರ ಸಂಜಾತರಾದ| ಆಶ್ವಲಾಯನ ಸೂತ್ರ[ಋ]ಕ್ ಶಾಖಿಗಳಾದ| ವೀರಶೈವ ಮತ ಧುರೀಣ ಪ್ರವೀಣರಾದ| ಶ್ರೀಮತ್ಕೊಡಗು ಸಂಸ್ಥಾನ ಸ್ಥಿತಾನವದ್ಯ ಕ್ಷೀರ ನಗರ ಮಧ್ಯ ಪರಿಭ್ರಾಜಮಾನ ಮಣಿಗಣ ಖಚಿತ ಚಾರುಸಿಂಹಾಸನಾರೂಢರಾದ| ಅಪ್ರತಿಮ ಪ್ರತಾಪ ಪ್ರಕಾಶ ಪ್ರಹಸಿತ ಮಾರ್ತಾಂಡ ಮಂಡಲರಾದ ಅಖಂಡಲಾಖಂಡ ವೈಭವ ಸಮೇತರಾದ| ಸಕಲ ದಿಗಂತರಾಳ ವಿದ್ಯೋತಮಾನ ಕೀರ್ತಿ ಪ್ರಖ್ಯಾತರಾದ| ಸಮಸ್ತ ಪ್ರಶಸ್ತ ರಾಜಧರ್ಮಾವಧರಣ ಯುಧಿಷ್ಠಿರರಾದ| ಮಹಾರಾಜ ಲಿಂಗರಾಜೇಂದ್ರವಡೆಯರ ಪೌತ್ರರಾದ| ಲಿಂಗರಾಜೇಂದ್ರವಡೆಯರವರ ಪುತ್ರರಾದ| ಶ್ರೀ ವೀರರಾಜೇಂದ್ರವಡೆಯರವರು ಸುಧರ್ಮ ಸುಶೀಲ ಸುಚರ್ಯದಿಂದ ಪೃಥ್ವೀಸಾಮ್ರಾಜ್ಯಂ ಗೈಯುತ್ತ ಅನುಗಾಲದಲ್ಲು ಮಹಾದೇವ ಧ್ಯಾನಪರರಾಗಿ ಇರುತಿರುವ'

ಎಂಬ ಪದಗಳನ್ನು ನೋಡಿ. ಕೊಡಗು ರಾಜನಾದ ವೀರರಾಜವಡೆಯರು 'ವೀರಶೈವ ಮತ ಧುರೀಣ ಪ್ರವೀಣ'ನೆಂದೂ, ಭರದ್ವಾಜ ಗೋತ್ರ, ಆಶ್ವಲಾಯನ ಸೂತ್ರ ಋಕ್ ಶಾಖೆಯವನೆಂದೂ ಈ ಪಂಕ್ತಿಗಳಲ್ಲಿ ಸ್ಪಷ್ಟವಾಗಿ ಉಲ್ಲಿಖಿತವಾಗಿರುವುದು.

ಅಲ್ಲದೆ ಸೋಮರಾಜನಿಗೆ ಬಸವನಲ್ಲಿಯೂ ಶೈವ ಮತದಲ್ಲಿಯೂ ಅತ್ಯಂತ ಭಕ್ತಿಯಿತ್ತೆಂದಷ್ಟು ಮಾತ್ರ ಉದ್ಭಟ ಕಾವ್ಯದಿಂದ ತಿಳಿದುಬರುವುದೇ ಹೊರತು (ಮ|| ಆಚಾರ್ಯರು ಮಾಡುವಂತೆ) ಅವನು ವೀರಶೈವನಾಗಿದ್ದನೆಂದು ಆ ಗ್ರಂಥದಿಂದ ನಿರ್ಧರಿಸುವುದು ಸಾಧುವಲ್ಲ.

ಕ್ರಿ. ಶ. ೧೬, ೧೭ ನೇ ಶತಮಾನಗಳಲ್ಲಿ ನಂಜರಾಜ ಪಟ್ಟಣದಲ್ಲಿ ಆಳುತ್ತಿದ್ದ ಚಂಗಾಳ್ವ ಅರಸರಿಗೆ ವೀರಶೈವ ಮತದಲ್ಲಿ ವಿಶೇಷ ಪಕ್ಷಪಾತವಿತ್ತೆಂದು ಅವರ ಶಾಸನಗಳಿಂದ ತಿಳಿದುಬರುವುದು (ಹುಣಸೂರು ೧೧೪ ನೇ ಶಾಸನವನ್ನು ನೋಡಿ). ಈ ಶಾಸನಗಳಲ್ಲಾದರೆ ಇವರು ಸೋಮವಂಶದವರೆಂದೂ, ಹರಿತ ಗೋತ್ರದ, ಆಶ್ವಲಾಯನ ಸೂತ್ರದ ಋಕ್ ಶಾಖಾಧ್ಯಾಯಿಗಳೆಂದೂ ಹೇಳಲ್ಪಟ್ಟಿರುವರು. ಹೀಗೆಯೇ ಮೈಸೂರು ರಾಜವಂಶದಲ್ಲಿ ಚಿಕ್ಕದೇವರಾಜವಡೆಯರಿಗೆ ಪೂರ್ವದಲ್ಲಿ ರಾಜ್ಯವಾಳಿದ ಯದುರಾಯರೇ ಮೊದಲಾದವರು ವೀರಶೈವ ಮತದಲ್ಲಿ

ಅತ್ಯಂತ ಪಕ್ಷಪಾತವುಳ್ಳವರಾಗಿದ್ದರೆಂದೂ, ಆದ್ದರಿಂದಲೇ 'ವಡೆಯರ್' ಎಂಬ ಹೆಸರನ್ನು ವಹಿಸಿಕೊಂಡರೆಂದೂ ಈ ರಾಜವಂಶದ ಇತಿಹಾಸದಲ್ಲಿ ಹೇಳಲ್ಪಟ್ಟಿರುವುದು. ದೊಡ್ಡದೇವರಾಜವಡೆಯರೇ ಮೊದಲಾದ ಈ ವಂಶದ ಅರಸುಗಳಾದರೆ ತಾವು ಆತ್ರೇಯ ಗೋತ್ರದವರೆಂದೂ ಆಶ್ವಲಾಯನ ಸೂತ್ರದವರೆಂದೂ ಶಾಸನಗಳಲ್ಲಿ ಹೇಳಿಕೊಂಡಿರುವರು.

ಆದ್ದರಿಂದ ತಾವು ಆತ್ರೇಯ ಗೋತ್ರ, ಆಪಸ್ತಂಬ ಸೂತ್ರ, ಯಜುಶ್ಶಾಖೆಯವರೆಂದು ನುಗ್ಗೆಹಳ್ಳಿಯ ಪಾಳೆಯಗಾರರು ಹೇಳಿಕೊಂಡ ಮಾತ್ರಕ್ಕೆ ಅವರು ವೀರಶೈವರಲ್ಲವೆಂದಾಗಲಿ ಅಥವಾ ವೀರಶೈವ ಮತದಲ್ಲಿ ಪಕ್ಷಪಾತವುಳ್ಳವರಲ್ಲವೆಂದಾಗಲಿ ನಿರ್ಧರಿಸುವುದು ತಪ್ಪೆಂದು ಮೇಲೆ ಹೇಳಿದುದರಿಂದ ಸ್ಪಷ್ಟವಾಗದಿರಲಾರದು.

ಉದ್ಭಟ ಕಾವ್ಯದಲ್ಲಿನ—

ಪ್ರಮಥಾನೀಕ ಕಥಾರ್ಣವೇಂದು ಹರಿದೇವಾಚಾರ್ಯನಂ ಧೈರ್ಯನಂ ।
ಸಮುದಂಚದ್ವೃಷಭಸ್ತವಾಮರಮಹೀಜಾರಾಮನಂ ಸೋಮನಂ ।
ವಿಮಲಜ್ಞಾನ ಸುದೀಪಿಕಾಸ್ಫುರಿತಚೇತಸ್ಸದ್ಮನಂ ಪದ್ಮನಂ ।
ಕ್ರಮದಿಂದಂ ಬಲಗೊಂಡು ಪೇೞ್ವೆನೊಸೆದಾನೀಕಾವ್ಯಮಂ ನವ್ಯಮಂ ॥

ಎಂಬ ಪದ್ಯದಲ್ಲಿ ಸೋಮರಾಜನು ಹರೀಶ್ವರ ಪಾಲ್ಕುರಿಕೆ ಸೋಮನಾಥರನ್ನು ಹೊಗಳಿರುವುದರಿಂದ, ಆ ಕಾವ್ಯವು ಕ್ರಿ. ಶ. ಸುಮಾರು ೧೩೦೦ ರ ಈಚೆಗೆ ಬರೆಯಲ್ಪಟ್ಟಿರಬೇಕೆಂಬುದರಲ್ಲಿ ಯಾವ ಸಂದೇಹವೂ ಇಲ್ಲ. ಹರೀಶ್ವರನು ಕ್ರಿ. ಶ. ಸುಮಾರು ೧೨೬೦ರಲ್ಲಿದ್ದನೆಂಬುದನ್ನು ನಾನು ಮೇಲೆಯೇ (ಪುಟ ೨೭೭) ವ್ಯಕ್ತಪಡಿಸಿರುವೆನು. ಪಾಲ್ಕುರಿಕೆ ಸೋಮನಾಥನೂ ಕೂಡ ಹೀಗೆಯೇ ಕ್ರಿ. ಶ. ೧೪ ನೇ ಶತಮಾನದ ಆದಿಯಲ್ಲಿದ್ದಿರಬಹುದೆಂದು ನಾನು ಮೇಲೆ (ಪುಟ ೨೭೬) ಊಹಿಸಿ ಹೇಳಿರುವೆನು. ಈ ಊಹೆಯು ವಸ್ತುಸ್ಥಿತಿಗೆ ಅವಿರುದ್ಧವೆಂದು ಇವನ ಸೋಮೇಶ್ವರ ಶತಕದ ಅಂತ್ಯ ಪದ್ಯದಲ್ಲಿರುವ 'ನಾಲ್ಸಾಸಿರಂ ನಾಲ್ಕುನೂಱುಂ ಕಲ್ಯಬ್ದದೆಗತಿಸೆ ವಿಕಾರ್ಯಬ್ದದಲ್ಲಿ ಈಶ್ವರಾ ನಿನ್ನಂಘ್ರಿಗಿತ್ತೆಂ' ಎಂಬ ವಾಕ್ಯದಿಂದ[19]

19. ಈ ವಾಕ್ಯವು ಕನ್ನಡ ಸಾಹಿತ್ಯ ಪರಿಷತ್ತಿನವರು ಮುದ್ರಿಸಿರುವ ಸೋಮೇಶ್ವರ ಶತಕದಲ್ಲಿರುವುದು (ಕವಿಚರಿತೆ ೩,೪೮೬ನ್ನು ನೋಡಿ).

ವ್ಯಕ್ತವಾಗುವುದು. ಈ ವಾಕ್ಯದಲ್ಲಿ ಕವಿಯು ಕಲಿಯುಗದ ೪೪೦೦ ನೇ ವಿಕಾರಿ ಸಂವತ್ಸರದಲ್ಲಿ, ಎಂದರೆ ಕ್ರಿ. ಶ. ೧೨೯೯ರಲ್ಲಿ ಆ ಕಾವ್ಯವು ತನ್ನಿಂದ ಬರೆಯಲ್ಪಟ್ಟಿತೆಂದು ಸ್ಪಷ್ಟವಾಗಿ ಹೇಳಿಕೊಂಡಿರುವನು. ಹೀಗೆಯೇ ಈ 'ಪಾಲ್ಕುರಿಕೆ ಸೋಮನು ಓರುಗಲ್ಲಿನ ಪ್ರತಾಪರುದ್ರನಿಂದ ಅಗ್ರಹಾರವನ್ನು ಪಡೆದನು' ಎಂದು ಮುಂತಾಗಿ ವೀರೇಶಲಿಂಗಂ ಪಂತುಲು (ತೆಲುಗು ಕವಿಗಳು I, ೨೧೭–೨೨೨) ಮೊದಲಾದ ತೆಲುಗು ಪಂಡಿತರಿಂದ ಇವನ ವಿಷಯವಾಗಿ ಹೇಳಲ್ಪಡುವ ಕಥೆಯೂ ಕೂಡ ಈ ಕವಿಯು ಕ್ರಿ. ಶ. ೧೨೯೨–೧೩೩೫ರಲ್ಲಿ ಆಳುತ್ತಿದ್ದ ಓರುಗಲ್ಲಿನ ಪ್ರತಾಪ ರುದ್ರನ ಸಮಕಾಲೀನನಾಗಿದ್ದನೆಂಬುದನ್ನು ಸ್ಪಷ್ಟಪಡಿಸುವುದು.[೨೦]

ಹಾಸನದ ೧೧೭ ನೇ ಶಾಸನದಲ್ಲಿ ಇಂದುಶೇಖರನ ಮಗ ಬಸವ ರಾಜ ಎಂದು ಹೇಳಿದೆಯೇ ಹೊರತು ಸೋಮರಾಜ ಎಂದು ಹೇಳಿಲ್ಲ ವೆಂದು ಮ|| ಆಚಾರ್ಯರು ಆಕ್ಷೇಪಮಾಡುತ್ತಾರೆ. ಇಂದುಶೇಖರನಿಗೆ ಬಸವರಾಜ ಎಂಬ ಮಗನಿದ್ದನೆಂದು ಹೇಳಿದಲ್ಲಿ ಸೋಮರಾಜ ಎಂಬ

---

20. ಕವಿಚರಿತೆ I. 292ರಲ್ಲಿ ಮ|| ಆಚಾರ್ಯರು ಪಾಲ್ಕುರಿಕೆ ಸೋಮನು ಬರೆದ ಆರಾಧ್ಯ ಚಾರಿತ್ರದ ಸಂಸ್ಕೃತ ಪರಿವರ್ತನರೂಪವಾದ ಗುರುರಾಜನ ಪಂಡಿತ ಚರಿತ್ರದಿಂದ—

ಬೆಲ್ದೇವೀವೇಮನಾರಾಧ್ಯ ಪ್ರಶಿಷ್ಯಸ್ಯ ಕೃಪಾನಿಧೇಃ |
ಗುರುಲಿಂಗಾರ್ಯಸ್ಯ ದಯಾಹಸ್ತಗರ್ಭಸಮುದ್ಭವಃ ||
ಬಸವೇಶಸ್ಯ ತನಯಃ ಬಸವೇಶ್ವರ ಗೋತ್ರಕಃ |
ಬಸವೇಶ ಭುಜಿಷ್ಯಾತ್ಮಭವೋ ಬಸವ ಕಿಂಕರಃ ||
ಶ್ರೀಮತ್ಪಾಲ್ಕುರ್ಕಿ ಸೋಮೇಶನಾಮಾಹಂ ಸರ್ವವಿತ್ತಮಃ |
ಪಂಡಿತಾರಾಧ್ಯ ಚರಿತಾಲಂಕೃತಾಂ ಕೃತಿಮಾರಭೇ ||

ಎಂಬ ಶ್ಲೋಕಗಳನ್ನು ಅನುವದಿಸಿ, 'ಈತನು ವೇಮನಾರಾಧ್ಯನ ಪ್ರಶಿಷ್ಯನಾದ ಗುರುಲಿಂಗಾರ್ಯನ ಶಿಷ್ಯನೆಂದೂ, ಬಸವೇಶನ ಶಿಷ್ಯನಾದ ಬಸವೇಶನ ಮಗನೆಂದೂ..ತಿಳಿಯುತ್ತದೆ' ಎಂದು ಹೇಳಿ, 'ಬಸವೇಶನ ಶಿಷ್ಯನ ಮಗನು ಎಂದು ಹೇಳಿಕೊಂಡಿರುವುದರಿಂದ ಬಸವನಿಂದ ಸುಮಾರು ೩೦ ವರ್ಷ ಈಚೆ ಇದ್ದಿರಬಹುದು. ಬಸವನು ೧೧೬೮ರಲ್ಲಿ ಮೃತನಾದಂತೆ ತಿಳಿವುದರಿಂದ ಈ ಕವಿ ಸುಮಾರು ೧೧೯೫ರಲ್ಲಿ ಇದ್ದಿರಬೇಕು' ಎಂದು ನಿರ್ಧರಿಸಿರುವರಷ್ಟೆ. ಉಕ್ತ ಶ್ಲೋಕಗಳಲ್ಲಾದರೆ ಈ ಕವಿಯು 'ಬಸವೇಶನ ಸೂಳೆಯ ಮಗನು' (ಭುಜಿಷ್ಯಾ, ಕುಂಭದಾಸೀ, ಗಣಿಕಾ ಎಂಬ ಪದಗಳು ವೇಶ್ಯಾಸ್ತ್ರೀಯರ ಅವಾಂತರ ಭೇದಗಳನ್ನು ಬೋಧಿಸುವುವು.) ಎಂದು ಹೇಳಲ್ಪಟ್ಟಿರುವುದೇ ಹೊರತು 'ಬಸವೇಶನ ಶಿಷ್ಯನ ಮಗನು' ಎಂದು ಹೇಳಲ್ಪಟ್ಟಿಲ್ಲ. ಭುಜಿಷ್ಯಾ ಎಂದರೆ ಶಿಷ್ಯ ಎಂದು ಮ|| ಆಚಾರ್ಯರು ಭ್ರಮಿಸಿರುವರೋ?

ಮಗನಿರಲಿಲ್ಲವೆಂದು ಹೇಳಿದ ಹಾಗಾಯಿತೆ? ಸೋಮರಾಜನ ವಿಷಯವು ಪ್ರಕೃತವಲ್ಲದುದರಿಂದ ಈ ಶಾಸನವು ಅವನ ವಿಷಯವಾಗಿ ಏನನ್ನೂ ಹೇಳದೆ, ಪ್ರಕೃತವಾದ ಬಸವರಾಜನ ವಿಷಯವನ್ನು ಮಾತ್ರ ಹೇಳಿರುವುದು. ಇದರಿಂದ ಇಂದುಶೇಖರನಿಗೆ ಸೋಮರಾಜ ಎಂಬ ಮಗನೇ ಇರಲಿಲ್ಲವೆಂದು ನಿರ್ಧರಿಸುವುದು ನ್ಯಾಯವೆ?

ಮೇಲೆ ಹೇಳಿದ ರಾಯಣ ಒಡೆಯನು ಕ್ರಿ. ಶ. ೧೫೩೦–೪೨ರಲ್ಲಿ ವಿಜಯನಗರದ ಅಚ್ಯುತರಾಯನ ಸಾಮಂತನಾಗಿದ್ದುದರಿಂದ ಇವನ ಮಮ್ಮಗನಾದ ಸೋಮರಾಜನು ಕ್ರಿ. ಶ. ೧೫೨೨ರಲ್ಲಿ ಹೇಗೆ ಕಾವ್ಯವನ್ನು ಬರೆದಿದ್ದಾನು ಎಂಬ ಆಕ್ಷೇಪಕ್ಕೆ ಸಮಾಧಾನವನ್ನು ನಾನು ಮೇಲೆಯೇ (ಪುಟ ೨೨೨ ಆದಿ) ಬರೆದಿದ್ದೇನೆ.

'ಜನನಾಥೋತ್ತಮ ಸೋಮನಾಥನುಸಿರ್ದೀ ಕಾವ್ಯಂ. . . . '

ಎಂಬ ಪದ್ಯದ ಎರಡನೇ ಪಾದದಲ್ಲಿ ನಾನು ಹೇಳುವ 'ನಾಸೂರ್ಸಂದು' ಎಂಬ ಪಾಠವು ಇದ್ದಿರಬಾರದೆಂದೂ, 'ಸೂರ್‌ಸಂದ' ಎಂಬ ಪ್ರಯೋಗವು ವ್ಯಾಕರಣ ವಿರುದ್ಧವಾದುದೆಂದು ಶಬ್ದಾನುಶಾಸನದ ೮೨ ನೇ ಸೂತ್ರದ ಕೆಳಗೆ ಕೊಟ್ಟಿರುವ 'ದೂಱು ಪುಟ್ಟಿತು' ಎಂಬ ನಿಷೇಧೋದಾಹರಣದಿಂದ ವ್ಯಕ್ತವಾಗುವುದೆಂದೂ,[21] ಸೋಮರಾಜನಂಥ ಗಣ್ಯನಾದ ಕವಿಯು

---

21. ಮ|| ಆಚಾರ್ಯರ ಈ ವಾಕ್ಯವನ್ನು ನೋಡಿದರೆ ಕರ್ಣಾಟಕ ಶಬ್ದಾನುಶಾಸನದಲ್ಲಿ ವಿಧಿಸಲ್ಪಟ್ಟ ನಿಯಮಗಳಿಗೆ ವಿರುದ್ಧವಾದ ಪ್ರಯೋಗಗಳನ್ನು ಸೋಮರಾಜನು ಉದ್ಭಟ ಕಾವ್ಯದಲ್ಲಿ ಮಾಡಿದರೆ ಅದು ಅವನಲ್ಲಿ ದೋಷವೆಂದು ಅವರು ಅಭಿಪ್ರಾಯಪಡುವಂತೆ ಭಾಸವಾಗುತ್ತದೆ. ಈ ವಿಧವಾದ ಅಭಿಪ್ರಾಯವು ಬಹು ವಿಚಿತ್ರವಾದುದು. ಸೋಮರಾಜನು ಕ್ರಿ. ಶ. ೧೫೨೨ರಲ್ಲಿ ಆ ಕಾವ್ಯವನ್ನು ಬರೆದುದರಿಂದ ಅವನು ಕ್ರಿ. ಶ. ೧೬೦೪ರಲ್ಲಿ ಜೀವಿಸುತ್ತಿರಲಿಲ್ಲವೆಂದೂ ಅದಕ್ಕೆ ಹಿಂದೆಯೇ ಪರಲೋಕಗತನಾದನೆಂದೂ ನಾವು ಸುಮಾರಾಗಿ ದೃಢವಾಗಿ ಹೇಳಬಹುದು. ಕರ್ಣಾಟಕ ಶಬ್ದಾನುಶಾಸನವಾದರೆ ಕ್ರಿ. ಶ. ೧೬೦೪ರಲ್ಲಿ ಬರೆಯಲ್ಪಟ್ಟಿತಾದಾಗ್ಯೂ ಅದು ವ್ಯಾಕರಣ ಗ್ರಂಥಗಳಲ್ಲಿ ಪ್ರಮಾಣಭೂತವಾದುದೆಂದು ಪ್ರಸಿದ್ಧವಾಗುವುದಕ್ಕೆ ೧೦, ೧೫ ವರ್ಷಗಳಾದರೂ ಆಗಿರಬೇಕೆಂದು ತೋರುತ್ತದೆ. ಹೀಗಿರುವಲ್ಲಿ ಆ ಗ್ರಂಥವು ಬರೆಯಲ್ಪಡುವುದಕ್ಕಿಂತ ಪೂರ್ವದಲ್ಲಿಯೇ ಮೃತನಾದ ಸೋಮರಾಜನು ಕ್ರಿ. ಶ. ೧೫೨೨ರಲ್ಲಿ ತನ್ನ ಕಾವ್ಯವನ್ನು ಬರೆಯುವಾಗ 'ಇನ್ನು ೮೦ ವರ್ಷಗಳ ನಂತರ ಭಟ್ಟಾಕಳಂಕನೆಂಬವನು ಕರ್ಣಾಟಕ ಕಾವ್ಯಾನುಶಾಸನವೆಂಬ ದೊಡ್ಡ ವ್ಯಾಕರಣ ಗ್ರಂಥವನ್ನು ಬರೆದು ಇಂತಹ ಪ್ರಯೋಗಗಳು ಸಾಧುವೆಂದೂ ಇಂತಹ ಪ್ರಯೋಗಗಳು ಅಸಾಧುವೆಂದೂ

ಇಂತಹ ವ್ಯಾಕರಣ ವಿರುದ್ಧ ಪ್ರಯೋಗಗಳನ್ನು ಮಾಡಿರಲಾರನೆಂದೂ ಮ॥ ಆಚಾರ್ಯರು LXIII ಪುಟದಲ್ಲಿ ಬರೆದಿದ್ದಾರೆ. ಈ ವಿಷಯದಲ್ಲಿ ಕಾಳಿದಾಸ, ಭಾರವ್ಯಾದಿ ಸಂಸ್ಕೃತ ಮಹಾಕವಿಗಳೂ ವ್ಯಾಕರಣ ವಿರುದ್ಧ ಪ್ರಯೋಗಗಳನ್ನು ಮಾಡಿರುವರೆಂದೂ, ಇಂತಹ ಪ್ರಯೋಗಗಳನ್ನು ಮಾಡುವುದರಿಂದ ಕವಿಯ ಮಹತ್ತ್ವಕ್ಕೆ ವಿಶೇಷವಾಗಿ ಕುಂದಾಯಿತೆಂದು ನಾವು ಭಾವಿಸಕೂಡದೆಂದೂ ನಾನು ಮೇಲೆಯೇ ಹೇಳಿರುವೆನು. ಪ್ರಕೃತ ಸೋಮರಾಜನಂತೂ ವ್ಯಾಕರಣ ವಿರುದ್ಧವಾದ ಇನ್ನೂ ಅನೇಕ ಪ್ರಯೋಗಗಳನ್ನು ಮಾಡಿರುವನೆಂಬುದನ್ನು ಮ॥ ಗೋವಿಂದ ಪೈಯವರು ಬೆಂಗಳೂರಿನಲ್ಲಿ ಪ್ರಕಟಿತವಾಗುವ 'ಸುಬೋಧ' ಪತ್ರಿಕೆಯ[22] ೫ ನೇ ಸಂಪುಟದ ೧ನೇ ಸಂಚಿಕೆಯಲ್ಲಿ (ನವೆಂಬರ್ ೧೯೨೯) ವ್ಯಕ್ತಪಡಿಸಿದ್ದಾರೆ (ಪುಟ ೧೧, ೧೨).

---

ಹೇಳುವನು' ಎಂದು ಸ್ವಪ್ನ ಕಾಣಬೇಕಾಗಿತ್ತೆ? ಆದ್ದರಿಂದ ಸೋಮರಾಜನು ವ್ಯಾಕರಣ ವಿರುದ್ಧವಾದ ಪ್ರಯೋಗಗಳನ್ನು ಮಾಡಿರುವನೆಂದು ಅವನಮೇಲೆ ದೋಷವನ್ನು ಹೊರಿಸಬೇಕಾದಲ್ಲಿ ನಾವು ಅವನ ಕಾಲದಲ್ಲಿ ಪ್ರಚಾರವಾಗಿದ್ದ ವ್ಯಾಕರಣ ಸೂತ್ರಗಳನ್ನು ಅನುವದಿಸಿ, ಅವಕ್ಕೆ ವಿರುದ್ಧವಾದ ಪ್ರಯೋಗಗಳನ್ನು ಸೋಮರಾಜನು ಮಾಡಿರುವನೆಂಬುದನ್ನು ಸ್ಥಾಪಿಸಬೇಕೇ ಹೊರತು ಕರ್ಣಾಟಕ ಶಬ್ದಾನುಶಾಸನದ ಸೂತ್ರಗಳನ್ನು ಈ ಸಂದರ್ಭದಲ್ಲಿ ಅನುವದಿಸುವುದರಿಂದ ಯಾವ ಪ್ರಯೋಜನವೂ ಇಲ್ಲವೆಂದು ನನ್ನ ಅಭಿಪ್ರಾಯ.

22. ಈ ಪತ್ರಿಕೆಯ ೧೮, ೧೯ ನೇ ಪುಟಗಳಲ್ಲಿ ಮ॥ ಪೈ ಅವರು 'ಜನನಾಥೋತ್ತಮ ಸೋಮರಾಜನುಸಿರ್ದ ಕಾವ್ಯಂ....' ಎಂಬ ಉದ್ಭಟಕಾವ್ಯದ ಅಂತ್ಯಪದ್ಯದಲ್ಲಿರುವ (ಮೇಲೆ ೨೧೯ ನೇ ಪುಟವನ್ನು ನೋಡಿ) 'ಉತ್ಸಿ(ಚ್ಛ್ರಿ)ತೈಕಾದಶೀ' ಎಂಬ ಪದಕ್ಕೆ ಬಹುಳ ಏಕಾದಶೀ ಎಂದು ನಾನು ಅರ್ಥಮಾಡಿರುವುದು (ಪುಟ ೨೨೨) ತಪ್ಪೆಂದೂ, ಅದಕ್ಕೆ ಶುದ್ಧ ಏಕಾದಶೀ ಎಂದು ಅರ್ಥಮಾಡಬೇಕೆಂದೂ ಬರೆದಿರುವರು. 'ಉಚ್ಛ್ರಿತ' ಎಂಬ ಪದದಲ್ಲಿರುವ ಉತ್ ಎಂಬುದು ಅತಿಶಯವಾಚಿಯೆಂದೂ, 'ಶ್ರಿತ' ಎಂಬುದು 'ಸಿತ' ಎಂಬ ಪದಕ್ಕೆ ಬದಲಾಗಿ ತಪ್ಪಾಗಿ ಬರೆಯಲ್ಪಟ್ಟಿದೆಯೆಂದೂ ಅವರ ಅಭಿಪ್ರಾಯ [ಆದ್ದರಿಂದ 'ಉತ್ಸಿತ' ಎಂದೇ ನಾನು ಇನ್ನುಮುಂದೆ ಇಲ್ಲಿ ಬರೆಯುವೆನು].

ಉತ್ ಎಂಬ ಪದವು ಅತಿಶಯಾರ್ಥವನ್ನು ಬೋಧಿಸುವುದೆಂಬುದರಲ್ಲಿ ಸಂದೇಹವಿಲ್ಲ (ಉದ್ಬುದ್ಧ, ಉದ್ಘೋಷಿತ, ಉದ್ಭೂತ ಮೊದಲಾದ ಪದಗಳನ್ನು ನೋಡಿ). ಆದರೆ 'ಉತ್ಸಿತೈಕಾದಶೀ' ಎಂಬ ಪದದಲ್ಲಿರುವ ಉತ್ ಎಂಬ ಪದಕ್ಕೆ ಈ ಅರ್ಥವನ್ನು ಹೇಳಿದಲ್ಲಿ ಆ ಸಮಸ್ತ ಪದಕ್ಕೆ 'ಅತಿಶಯವಾಗಿ ಧವಳವಾದ ಏಕಾದಶೀ, ಅತಿಶಯ ಶುದ್ಧ ಏಕಾದಶೀ' ಎಂದು ಅರ್ಥಮಾಡಬೇಕಾಗುವುದು. ಇಂತಹ ಪ್ರಯೋಗವನ್ನು ನಾನು ಈವರೆಗೆ ಎಲ್ಲಿಯೂ ನೋಡಿಲ್ಲ. 'ಶುದ್ಧ, ಸಿತ, ಶುಕ್ಲ ಏಕಾದಶೀ' ಎಂದು ಮೊದಲಾದ ಪ್ರಯೋಗವನ್ನು

## ಕವಿಗಳು, ಕವಿಮಾರ್ಗವೇತ್ತೃಗಳು

ಸಾಕಾದ ಆಧಾರವಿಲ್ಲದೆಯೇ ಮ॥ ಆಚಾರ್ಯರು ಮಾದಿರಾಜ ಮುನಿ, ಕೇಶಿ ದಂಡನಾಯಕ ಮೊದಲಾದವರು ಕಾವ್ಯಕರ್ತೃಗಳೆಂದು ನಿಶ್ಚಯಿಸಿರುವುದು ನ್ಯಾಯವಲ್ಲವೆಂದು ನಾನು ಮೇಲೆ (ಪುಟ ೨೨–೨೭) ಬರೆದಿರುವೆನಷ್ಟೆ. ಈ ಆಕ್ಷೇಪಣೆಗೆ ಸಮಾಧಾನರೂಪವಾಗಿ ಮ॥ ಆಚಾರ್ಯರು—

" ನಾನು ಸಾಕಾದ ಆಧಾರವಿಲ್ಲದೆ ಕೆಲವರನ್ನು ಕವಿಗಳು ಅಥವಾ ಗ್ರಂಥಕರ್ತೃಗಳು ಎಂದು ಕರೆದಿದ್ದೇನೆ ಎಂದು ಅಯ್ಯನವರು ಆಕ್ಷೇಪಿಸುತ್ತಾರೆ (ಪುಟಗಳು ೨೨–೨೭). ಈ ವಿಷಯದಲ್ಲಿ ನಾನು ಆ ಆ ವ್ಯಕ್ತಿಗಳ ವಿಶೇಷಗಳು, ವರ್ಣನೆ ಇವುಗಳನ್ನು ಪರಿಶೀಲಿಸಿ ಅರ್ಹತೆಯನ್ನು ಊಹಿಸಿ ಬಳಿಕ ಕವಿ ಅಥವಾ ಗ್ರಂಥಕರ್ತೃ ಎಂಬ ಹೆಸರನ್ನು ಹೇಳಿದ್ದೇನೆ. ಇತರ ದ್ರಾವಿಡ ಭಾಷೆಗಳಲ್ಲಿ ಸಾಹಿತ್ಯ ಚರಿತೆಯನ್ನು ಬರೆದಿರುವವರೂ ಹೀಗೆಯೇ ಮಾಡಿದ್ದಾರೆ. ತಿಕ್ಕನಸೋಮಯಾಜಿಯ

---

ನಾನು ನೋಡಿರುವೆನೇ ಹೊರತು 'ಅತಿಶುದ್ಧ, ಅತಿಶುಕ್ಲ, ಅತಿಶಯ ಸಿತ, ಶುಕ್ಲತಮ, ಸಿತತಮ ಏಕಾದಶೀ' ಎಂದು ಮೊದಲಾದ ಪ್ರಯೋಗವನ್ನು ಯಾವ ಗ್ರಂಥಕರ್ತೃವೂ ಮಾಡಿರುವಂತಿಲ್ಲ.

ಉತ್ ಎಂಬ ಪದವು ಅತಿಶಯಾರ್ಥವನ್ನಲ್ಲದೆ 'ಇತರ, ಅಭಾವ' ಎಂಬ ಅರ್ಥವನ್ನೂ ಬೋಧಿಸುವುದು ಉದಾ ನತ ಬಗ್ಗಿರುವುದು, ಉನ್ನತ—ಬಗ್ಗಿಲ್ಲದೆ ಇರುವುದು, ಎತ್ತರವಾದುದು. ನಿಮೀಲಿತ, ಮುಚ್ಚಿಕೊಂಡಿರುವುದು, ಉನ್ಮೀಲಿತ, ತೆರೆದುಕೊಂಡಿರುವುದು, ಘಟಿತ, ಸೇರಿಸಿರುವುದು, ಉದ್ಘಾಟಿತ, ತೆರೆಯಲ್ಪಟ್ಟಿರುವುದು, ವಾಸಿತ, ಇಡಲ್ಪಟ್ಟಿರುವುದು, ಉದ್ವಾಸಿತ, ಕಳುಹಿಸಲ್ಪಟ್ಟಿರುವುದು. (ಸಿತ ಶಿತ ಎಂಬ ಪದಗಳು, ಷೋ ಅಂತಕರ್ಮಣಿ. ಶೋ ತನೂಕರಣೇ ಎಂಬ ಧಾತುಗಳಿಗೆ ಕ್ತಪ್ರತ್ಯಯವನ್ನು ಸೇರಿಸಿ ಆಗಿರುವ ರೂಪಗಳಾದ್ದರಿಂದ, ಉದಾಹರಣೆಗಳಲ್ಲಿಯೂ ನಾನು ಕ್ತಪ್ರತ್ಯಯಾಂತವಾದ ರೂಪಗಳನ್ನೇ ಕೊಟ್ಟಿರುವೆನು.) ಉತ್ಸಿತ ಎಂಬ ಪದದಲ್ಲಿರುವ ಉತ್ ಎಂಬುದಕ್ಕೂ ನಾವು ಇದೇ ಅರ್ಥವನ್ನೇ ಹೇಳಿದರೆ, ಉತ್ಸಿತ ಎಂದರೆ ಸಿತವಲ್ಲದ್ದು (ಸಿತೇತರ), ಕೃಷ್ಣ ಎಂದು ಅರ್ಥವಾಗುವುದು.

ಸಿತ ಎಂಬ ಪದಕ್ಕೆ ಸಿತಪಕ್ಷ ಎಂಬ ಅರ್ಥವೂ ಉಂಟು ; ಈ ವಿಷಯದಲ್ಲಿ ಸೆಂಟ್ ಪೀಟರ್ಸ್‌ಬರ್ಗ್ ಕೋಶಗಳನ್ನೂ ಬೃಹತ್ಸಂಹಿತೆಯಲ್ಲಿ (೨೧, ೯) ಪ್ರಯುಕ್ತವಾಗಿರುವ 'ಮಾಘಸಿತೋತ್ಥಾ' ಎಂಬ ಪದವನ್ನೂ ನೋಡಿ. 'ಉತ್ಸಿತ' ಎಂಬ ಪದದಲ್ಲಿರುವ 'ಸಿತ' ಎಂಬುದಕ್ಕೆ ಹೀಗೆ 'ಶುಕ್ಲಪಕ್ಷ' ಎಂದು ಅರ್ಥಮಾಡಿದರೂ ಕೂಡ ಆ ಪದಕ್ಕೆ 'ಶುಕ್ಲ

ತಾತ ಮಂತ್ರಿ ಭಾಸ್ಕರನ ವಿಷಯವಾಗಿ ಕೇತನ ಕೃತ ದಶಕುಮಾರ ಚರಿತದಲ್ಲಿ "ಸಾಹಿತ್ಯ ವಿದ್ಯಾಪಾರೀಣುಡು ಅನಿ ಚೆಪ್ಪುಟಚೇತ ಯಾತಡು ಕವಿಯೈನಟ್ಲೂಹಚೇಯುವಚ್ಚುನು" ಎಂದು ಶ್ರೀಮಾನ್ ವೀರೇಶಲಿಂಗಂ ಪಂತುಲು ತೆಲುಗು ಕವಿಗಳ ಚರಿತ್ರೆಯ ೧ನೆಯ ಸಂಪುಟದಲ್ಲಿ ಬರೆದಿದ್ದಾರೆ (ಪುಟ ೧೨೧). ಈ ವ್ಯಕ್ತಿಗಳಿಗೆ ಕವಿ ಎಂಬ ಉಪಪದವು ಹೇಳಿದ್ದರೂ ಅದಕ್ಕೆ ಕವಿಮಾರ್ಗವೇತ್ತೃ ಎಂದು ಅರ್ಥ ಮಾಡಬೇಕೇ ಹೊರತು ಕವನಮಾಡುವವನು ಎಂದು ಅರ್ಥಮಾಡ ಕೂಡದು ಎಂದು ಅಯ್ಯನವರು ಹೇಳುತ್ತಾರೆ. ಈ ಸೂಕ್ಷ್ಮಭೇದವನ್ನು ಗ್ರಹಿಸುವುದು ಸಾಮಾನ್ಯ ಜನರಿಗೆ ಸಾಧ್ಯವಲ್ಲ. ಕವಿಮಾರ್ಗವೇತ್ತೃ ಕವಿಯಾಗಿ ಏಕಿರಕೂಡದು ಎಂಬ ಸಂದೇಹವು ಅನೇಕರಿಗೆ ಹುಟ್ಟದೆ ಇರಲಾರದು. 'ದುರ್ಗಸಿಂಹ, ರನ್ನ, ಚಂದ್ರರಾಜ ಇವರಂಥ ಉದ್ದಾಮ ಕವಿಗಳ ಕಾವ್ಯಗಳನ್ನು ತಿದ್ದಬೇಕಾದರೆ ಸ್ವತಃ ಪ್ರೌಢ ಕವಿಗಳಲ್ಲದವರಿಗೆ ಎಂದಿಗಾದರೂ ಸಾಧ್ಯವಾಗುವುದೇ? ಉದಾಹರಣೆಗಾಗಿ ಬೂಚಿರಾಜನನ್ನು (I, ೨೬೬) ತೆಗೆದುಕೊಳ್ಳುವ. ಹಾಸನ ೧೧೯ ರಲ್ಲಿ ಈತನನ್ನು ಕನ್ನಡ ಸಂಸ್ಕೃತ ಎರಡರಲ್ಲಿಯೂ ಪೊನ್ನಸಿಗೆ ಸಮಾನನಾದ ಕವಿ ಎಂದು ವರ್ಣಿಸಿದೆ. ಇವನನ್ನು ಕವಿ ಎಂದು ಕರೆವುದೂ ಇವನು ಗ್ರಂಥಗಳನ್ನು ಬರೆದಿರಬಹುದೆಂದು ಊಹಿಸುವುದೂ ಅಸಾಧುವೇ?"

ಎಂದು LXXIX ಪುಟದಲ್ಲಿ ಬರೆದಿದ್ದಾರೆ.

---

ಪಕ್ಷವನ್ನು ಬಿಟ್ಟದ್ದು, ಎಂದರೆ, ಕೃಷ್ಣಪಕ್ಷಕ್ಕೆ 'ಸೇರಿದ' ಎಂದು ಅರ್ಥವಾಗುವುದು.) (ಉನ್ಮಾರ್ಗ, ಉತ್ಸೂತ್ರ, ಉದ್ವೃತ್ತ, ಉಚ್ಛಾಸ್ತ್ರ, ಮುಂತಾದ ಪದಗಳ ಅರ್ಥವನ್ನು ನೋಡಿ.

ಉತ್ಸಿತ ಎಂಬ ಪದವು ಬೇರೆ ಯಾವ ಕಡೆಯೂ (ನಮಗೆ ತಿಳಿದಂತೆ) ಉಪಯೋಗಿಸಲ್ಪಟ್ಟಿಲ್ಲವೆಂಬುದನ್ನೂ ಅದು ಯಾವ ನಿಘಂಟುವಿನಲ್ಲಿಯೂ ಹೇಳಲ್ಪಟ್ಟಿಲ್ಲವೆಂಬುದನ್ನೂ ಮ|| ಪೈ ಅವರೇ ಒಪ್ಪಿಕೊಳ್ಳುತ್ತಾರಾದ್ದರಿಂದ ಮೇಲೆ ಹೇಳಿದುದನ್ನೆಲ್ಲಾ ಪರ್ಯಾಲೋಚಿಸಿದರೆ ಸದ್ಯಸ್ಕಾಲದಲ್ಲಿ ಆ ಪದಕ್ಕೆ ಶುಕ್ಲ ಎಂದು ಅರ್ಥಮಾಡುವುದಕ್ಕಿಂತಲೂ ಕೃಷ್ಣ ಎಂದು ಅರ್ಥಮಾಡುವುದೇ ಉತ್ತಮಪಕ್ಷವೆಂದು ನನಗೆ ತೋರುವುದು. ಕೃಷ್ಣ ಎಂದು ಅರ್ಥಮಾಡುವುದು ತಪ್ಪೆಂದು ಹೇಳುವುದಕ್ಕಂತೂ ನನಗೆ ತಿಳಿದಂತೆ ಯಾವ ಆಧಾರವೂ ಇಲ್ಲವಾದ್ದರಿಂದ, ಹಾಗೆ ಹೇಳುವುದು ನ್ಯಾಯವಲ್ಲವೆಂದು ನನಗೆ ತೋರುವುದು.

ಉಕ್ತ ಹಾಸನದ ೧೧೯ನೇ ಶಾಸನದಲ್ಲಿ ಬೂಚಿರಾಜನು ತತ್ತ್ವಾರ್ಥ ಸೂತ್ರಕ್ಕೆ ಒಂದು ವ್ಯಾಖ್ಯಾನವನ್ನು ಬರೆದನೆಂದು ಸೂಚಿಸಲ್ಪಟ್ಟಿಂತಿರುವುದರಿಂದ ಅವನು ಗ್ರಂಥವನ್ನು ಬರೆದನೆಂದೂ ಅವನ ಚರಿತವನ್ನು ಮ॥ ಆಚಾರ್ಯರು ಕವಿಚರಿತೆಯಲ್ಲಿ ಸೇರಿಸಿರುವುದು ನ್ಯಾಯವೆಂದೂ ನಾನು ಒಪ್ಪಿಕೊಳ್ಳುತ್ತೇನೆ. ಹೀಗೆಯೇ ಮಾದಿರಾಜ ಮುನಿಯ ವಿಷಯದಲ್ಲಿಯೂ (ಪುಟ ೨೨) ಮುನಿಚಂದ್ರನ ವಿಷಯದಲ್ಲಿಯೂ (ಪುಟ ೨೪) 'ಕವಿ' ಎಂಬ ವಿಶೇಷಣವು ಉಪಯೋಗಿಸಲ್ಪಟ್ಟಿರುವುದರಿಂದ ಅವರು ಗ್ರಂಥಗಳನ್ನು ಬರೆದಿರಬಹುದೆಂಬ ಮ॥ ಆಚಾರ್ಯರ ಭಾವನೆಯು ಒಂದು ವೇಳೆ ನ್ಯಾಯವಾಗಿದ್ದರೂ ಇರಬಹುದು. ಆದರೆ ರನ್ನನ ಸಾಹಸ ಭೀಮವಿಜಯವನ್ನು ತಿದ್ದಿದ ಕೇಶಿದಂಡನಾಯಕನೂ, ಮದನತಿಲಕವನ್ನು ತಿದ್ದಿದ ಬ್ರಹ್ಮನೂ, ಅಬ್ಬಲೂರು ಶಾಸನವನ್ನು ತಿದ್ದಿದ ಸರಣನೂ ಕವಿಗಳಾಗಿದ್ದರೆಂದು ಉಕ್ತ ಗ್ರಂಥಗಳಲ್ಲಿಯೂ ಶಾಸನದಲ್ಲಿಯೂ ಹೇಳಲ್ಪಡದೆ ಇರುವಾಗ, ಅವರು ಕವಿಗಳಾಗಿದ್ದರೆಂದು(ಎಂದರೆ ಗ್ರಂಥಗಳನ್ನು ಬರೆದರೆಂದು) ಊಹಿಸುವುದು ಅನ್ಯಾಯವೆಂದೇ ನನ್ನ ಅಭಿಪ್ರಾಯ.

ಕಾವ್ಯವನ್ನು ತಿದ್ದುವವನು ತಾನೂ ಕವಿಯಾಗಿರಬೇಕೆಂಬ ಮ॥ ಆಚಾರ್ಯರ ಅಭಿಪ್ರಾಯವನ್ನು ನಾನು ಒಪ್ಪಲಾರೆನು. ಕಾವ್ಯವನ್ನು ಬರೆಯುವವನು ಕವಿಯಾಗಿರಬೇಕು; ಅದನ್ನು ತಿದ್ದುವವನಿಗೆ ಛಂದೋವ್ಯಾಕರಣಾಲಂಕಾರ ಶಾಸ್ತ್ರಗಳಲ್ಲಿಯೂ ನಿಘಂಟಿನಲ್ಲಿಯೂ ಕಾವ್ಯ ಗ್ರಂಥಗಳಲ್ಲಿಯೂ ಜ್ಞಾನವಿದ್ದರೆ ಸಾಕು. ಈ ವಿಷಯಗಳಲ್ಲಿ ಅತಿಶಯ ಜ್ಞಾನವುಳ್ಳವರು ರನ್ನನಂಥ ಉದ್ದಾಮ ಕವಿಗಳು ಬರೆದ ಕಾವ್ಯವನ್ನೂ, ಸಾಮಾನ್ಯ ಜ್ಞಾನವುಳ್ಳವರು ಸಾಮಾನ್ಯ ಕವಿಗಳು ಬರೆದ ಕಾವ್ಯವನ್ನೂ ಸುಲಭವಾಗಿ ತಿದ್ದಬಲ್ಲರು. ಉಕ್ತ ವಿಷಯಗಳಲ್ಲಿ ಸ್ವಲ್ಪ ಜ್ಞಾನವುಳ್ಳ ನಾನೇ ಈಗ ಎರಡು ಮೂರು ತಿಂಗಳ ಹಿಂದೆ ಒಬ್ಬ ಕವಿಯು ನನ್ನ ಬಳಿಗೆ ತಂದ ೧೦, ೧೬ ಶ್ಲೋಕಗಳಲ್ಲಿದ್ದ ತಪ್ಪುಗಳನ್ನು ತಿದ್ದಿಕೊಟ್ಟಿರುವೆನು. ಕವಿ ಎಂಬ ಪದದಿಂದ ವಿಶೇಷಿಸಲ್ಪಡುವ ಯೋಗ್ಯತೆಯು ಲೇಶಮಾತ್ರವೂ ನನ್ನಲ್ಲಿಲ್ಲವೆಂಬುದನ್ನು ನಾನೂ ಬಲ್ಲೆನು, ನನ್ನನ್ನರಿತವರೂ ಬಲ್ಲರು.

ಹೀಗೆಯೇ 'ಸಾಹಿತ್ಯ ವಿದ್ಯಾಪಾರೀಣನು ಎಂದು ಹೇಳಲ್ಪಟ್ಟಿರುವುದರಿಂದ ಅವನು ಕವಿ (ಎಂದರೆ ಕಾವ್ಯವನ್ನು ಬರೆದಿರುವವನು) ಎಂದು ಊಹಿಸಬಹುದು' ಎಂಬ ವೀರೇಶಲಿಂಗಂ ಪಂತುಲು ಅವರ ಉಕ್ತ ಅಭಿಪ್ರಾಯವನ್ನೂ ನಾನು ಒಪ್ಪಲಾರೆನು. 'ಸಾಹಿತ್ಯ ವಿದ್ಯಾಪಾರೀಣನು' ಎಂದರೆ 'ಸಾಹಿತ್ಯದಲ್ಲಿ ನಿಷ್ಣಾತನು, ಕಾವ್ಯಾಲಂಕಾರ ನಾಟಕಾದಿಗಳಲ್ಲಿ ಅತಿಶಯವಾದ ಪಾಂಡಿತ್ಯವುಳ್ಳವನು' ಎಂದು ಅರ್ಥವು. ಇಂತಹ ಪಾಂಡಿತ್ಯವುಳ್ಳವರೆಲ್ಲರೂ ಕಾವ್ಯಗಳನ್ನು ಬರೆದಿರುವರೆಂಬುದನ್ನು ಆರೂ ನಂಬಲಾರರು. ಅನಾದಿ ಅಗ್ರಹಾರವಾದ ಕುಪ್ಪಟೂರ 'ಸಾಸಿರ' ಬ್ರಾಹ್ಮಣರು 'ನಾಟಕೇತಿಹಾಸ ಮೀಮಾಂಸಾ ಭರತ ಗಣಿತ ವಾತ್ಸ್ಯಾಯನಾದಿ ಸಕಲ ಶಾಸ್ತ್ರ ಪ್ರವೀಣ'ರಾಗಿದ್ದರೆಂದು ಸೊರಬದ ೨೭೬ನೇ ಶಾಸನದಲ್ಲಿಯೂ, ಮಹಾಗ್ರಹಾರವಾದ ತಾಣಗುಂಡೂರಿನ 'ಮೂವತ್ತಿರ್ಛಾಸಿರ' ಬ್ರಾಹ್ಮಣರು '....ಷಟ್ತರ್ಕ-ಸ್ಮೃತಿ-ಪುರಾಣ-ನಾಟಕ ವಿಷಯ-ಸರೋಜಿನೀ-ಭಾಸ್ಕರ'ರಾಗಿದ್ದರೆಂದು ಶಿಕಾರಿಪುರದ ೧೭೮ ನೇ ಶಾಸನದಲ್ಲಿಯೂ ಹೇಳಲ್ಪಟ್ಟಿರುವುದರಿಂದ, ಆ ಎರಡು ಅಗ್ರಹಾರಗಳಲ್ಲಿದ್ದ ಮೂವತ್ತುಮೂರು ಸಹಸ್ರ ಬ್ರಾಹ್ಮಣರೆಲ್ಲರೂ ಕಾವ್ಯಗಳನ್ನು ರಚಿಸಿದ್ದರೆಂದು ಊಹಿಸುವುದು ನ್ಯಾಯವೇ?[23]

---

23. ವೀರಬಲ್ಲಾಳನ ಮಂತ್ರಿಯಾಗಿದ್ದ ಚಂದ್ರಮೌಳಿಯು 'ಸಮುದ್ಧುರ ಸಾಹಿತ್ಯ ಲತಾಲವಾಲಂ' ಎಂದು ಶ್ರ. ಬೆ. ೭೨೬ ನೇ ಶಾಸನದಲ್ಲಿ ಸ್ತುತನಾಗಿರುವನು. ಮೇಲೆ ೧೦ ನೇ ಪುಟದಲ್ಲಿ ಪ್ರಸ್ತುತನಾದ ಗಂಡವಿಮುಕ್ತ ಸಿದ್ಧಾಂತದೇವನ ಶಿಷ್ಯ ದೇವಕೀರ್ತಿಯಲ್ಲಿ 'ಚತುರತೆ ಸತ್ಕವಿತ್ವದೊಳಭಿಜ್ಞತೆ ಶಬ್ದಕಲಾಪದೊಳ್' ವಿರಾಜಿಸುತಿರ್ತ್ತೆಂದು ಶ್ರ. ಬೆ. ೬೩ ನೇ ಶಾಸನದಲ್ಲಿ ಹೇಳಲ್ಪಟ್ಟಿರುವುದು. ಹೀಗೆಯೇ ಹೊಯ್ಸಲ ರಾಜನಾದ ವಿಷ್ಣುವರ್ಧನನು 'ಕವಿತ್ವ ತತ್ವ ನಿಶಿತ ಬುದ್ಧಿ....ಪ್ರಸಿದ್ಧ'ಯಾಗಿದ್ದನೆಂದು ಬೇಲೂರು ೧೬ನೇ ಶಾಸನದಲ್ಲಿಯೂ, ನೊಳಂಬವಾಡಿಯನ್ನಾಳುತ್ತಿದ್ದ ಮಹಾಮಂಡಲೇಶ್ವರ ವೀರಪಾಂಡ್ಯನು 'ಭವ್ಯ-ಶ್ರಾವ್ಯ-ಕಾವ್ಯ-ನಾಟಕಾಖ್ಯಾಯಿಕಾಖ್ಯಾನಾದಿ-ವ್ಯಾಖ್ಯಾನ-ವ್ಯಾಪಾರ ......ತನವ್ಯ ಶ್ರೀಹರ್ಷ'ನೆಂದು ದಾವಣಗೆರೆ ೪೧ ನೇ ಶಾಸನದಲ್ಲಿಯೂ, ಕರ್ಣಪಾರ್ಯನ ಪೋಷಕನಾದ ಲಕ್ಷ್ಮರಾಜನ ತಮ್ಮನಾದ ಶಾಂತನಾಥನು 'ಸರ್ವಾಂಗ-ಸದ್ಭಾರತೀಶ್ವರ' ನಾಗಿದ್ದನೆಂದು ನೇಮಿನಾಥಪುರಾಣದಲ್ಲಿಯೂ (ಪದ್ಯ ೭೨, ಮೇಲೆ ೮೦ನೇ ಪುಟವನ್ನು ನೋಡಿ) ಹೇಳಲ್ಪಟ್ಟಿರುವುದರಿಂದ ವೀರೇಶಲಿಂಗಂ ಪಂತುಲು ಅವರ ಮೇಲೆ ಹೇಳಿದ ಅಭಿಪ್ರಾಯಕ್ಕನುಸಾರವಾಗಿ ಇವರೆಲ್ಲರೂ ಕವಿಗಳಾಗಿದ್ದಿರಬೇಕೆಂದು ಊಹಿಸಬೇಕು. ಇಂತಹ ವಿಶೇಷಣಗಳು

ಆದ್ದರಿಂದ ಸಾಹಿತ್ಯ-ವಿದ್ಯಾಪಾರೀಣ, ಸರಸ್ವತೀ-ಕರ್ಣಾವತಂಸ, ಭಾರತೀ-ಕರ್ಣಪೂರ, ವಿಬುಧ-ಜನಮನಃಪದ್ಮಿನೀ-ರಾಜಹಂಸ, ಸರ್ವಾಂಗ-ಸದ್ಭಾರತೀಶ್ವರ ಎಂದು ಮೊದಲಾದ ವಿಶೇಷಣಗಳು ವಿದ್ಯಾಶಾಲಿತ್ವವನ್ನು ಮಾತ್ರ ದ್ಯೋತಿಸುವುವೆಂದೂ, ಆದ್ದರಿಂದ ಆ ವಿಶೇಷಣಗಳಿಂದ ಲಕ್ಷಿತರಾದವರು ಕಾವ್ಯಗಳನ್ನು ಬರೆದ ಕವಿಗಳೆಂದು ಈ ವಿಶೇಷಣಗಳ ಆಧಾರದಿಂದ ನಿರ್ಣಯಿಸುವುದು ಅಸಾಧುವೆಂದೂ ನನ್ನ ದೃಢವಾದ ಅಭಿಪ್ರಾಯ.

---

ನಾಗಚಂದ್ರ, ರುದ್ರಭಟ್ಟ, ಹರೀಶ್ವರಾದಿಗಳು, ಸುಮನೋಬಾಣ, ಕರ್ಣಪಾರ್ಯ, ಮಲ್ಲಿಕಾರ್ಜುನ ಮತ್ತು ಸೋಮರಾಜ ಎಂಬ ಇಷ್ಟು ಕವಿಗಳ ವಿಷಯವಾಗಿ ನಾನು ನನ್ನ ಲೇಖನದಲ್ಲಿ ಬರೆದಿರುವದರ ಮೇಲೆ ಮ॥ ಆಚಾರ್ಯರು ಉಕ್ತ ಅವತರಣಿಕೆಯಲ್ಲಿ ಮಾಡಿರುವ ಕೆಲವು ಆಕ್ಷೇಪಗಳು ಪ್ರಯೋಜನಕಾರಿಯಲ್ಲವೆಂದು ನಾನು ಹೀಗೆ ಮೇಲೆ ಬರೆದ ಪಂಕ್ತಿಗಳಲ್ಲಿ ವ್ಯಕ್ತಪಡಿಸಿರುವೆನು. ಇದೇ ಕವಿಗಳ ವಿಷಯದಲ್ಲಿಯೂ ಮತ್ತು ನಾಗವರ್ಮ ಕಮಲಭವಾದಿ ಕವಿಗಳ ವಿಷಯದಲ್ಲಿಯೂ ಮ॥ ಆಚಾರ್ಯರು ಮಾಡಿರುವ ಇತರ ಆಕ್ಷೇಪಗಳೂ[24]

---

ಕನ್ನಡ ಶಾಸನಗಳಲ್ಲಿಯೂ ಮತ್ತು ಗ್ರಂಥಗಳಲ್ಲಿಯೂ ಅನೇಕ ಜನರ ವಿಷಯದಲ್ಲಿ ಹೇಳಲ್ಪಟ್ಟಿರುವವಾದ್ದರಿಂದ ಮ॥ ಆಚಾರ್ಯರು ಇಂಥವರ ಚರಿತವನ್ನೆಲ್ಲಾ ತಮ್ಮ ಕರ್ಣಾಟಕ ಕವಿಚರಿತೆಯಲ್ಲಿ ಸೇರಿಸಬೇಕೆಂದರೆ ಇನ್ನು ಮೂರು ಸಂಪುಟಗಳನ್ನು ಬರೆದರೂ ಸಾಕಾಗುವಂತಿಲ್ಲ

24. ಪ್ರಾಸಂಗಿಕವಾಗಿ ನಾನು ಹೇಳಿರುವ ಕೆಲವು ವಿಷಯಗಳನ್ನು ಕುರಿತು ಮ॥ ಆಚಾರ್ಯರು ಮಾಡಿರುವ ಆಕ್ಷೇಪಗಳಾದರೆ ನ್ಯಾಯ್ಯವಾಗಿವೆಯೆಂಬುದನ್ನು ನಾನು ಒಪ್ಪಿಕೊಳ್ಳುತ್ತೇನೆ. 'ಕಂತಿ ಎಂಬುದಕ್ಕೆ ಸನ್ಯಾಸಿನಿ ಎಂದರ್ಥವು ತಿಸ್ಯಳು ಎ ದಲ್ಲ' (ಪುಟ LXXIX) ಎಂದೂ, 'ಈಗ ಸಿಕ್ಕಿರುವ ಶಾಸನಗಳೊಳಗೆ ೧೧೮೪ರಲ್ಲಿ ಹುಟ್ಟಿದ ಒಂದರಲ್ಲಿ ಉಮಾದೇವಿಯ ಹೆಸರು ಹೇಳಿದೆ ಎಂದ ಮಾತ್ರಕ್ಕೆ ಆ ವರ್ಷಕ್ಕೆ ಕೆಲವು ವರ್ಷಗಳ ಹಿಂದೆ, ಎಂದರೆ ಸು. ೧೧೬೦ರಲ್ಲಿ ಅವಳು ಎನೆಯ ಬಲ್ಲಾಳನ ಮಹಿಷಿಯಾಗಿರಕೂಡದು ಎಂಬ ನಿಬಂಧವೇನೂ ಇಲ್ಲ' ಎಂದೂ (ಪುಟ XLVIII); 'ಮೂರು ಶಾಸನಗಳಲ್ಲಿ ಮಾತ್ರ ಉಕ್ತವಾಗಿ ಉಳಿದವುಗಳಲ್ಲಿ ಉಕ್ತವಾಗದೆ ಇರುವುದರಿಂದ ಪೆಣ್ಣೆಂಗಡಲು ಪ್ರಸಿದ್ಧವಾದ ಸ್ಥಳವಲ್ಲ ಎನ್ನುತ್ತಾರೆ. ಒಂದು ಸ್ಥಳದ ಪ್ರಸಿದ್ಧಿ ಅದು ಹೇಳಲ್ಪಟ್ಟಿರುವ ಶಾಸನಗಳ

ಹೀಗೆಯೇ ಪ್ರಯೋಜನಕಾರಿಯಾಗಿಲ್ಲವೆಂಬುದನ್ನೂ ಮ॥ ಆಚಾರ್ಯರು ಹೇಳಿರುವ ಸಮಾಧಾನಗಳಲ್ಲಿಯೂ ಅನೇಕ ದೋಷಗಳಿರುವುವು ವೆಂಬುದನ್ನೂ ವ್ಯಕ್ತಪಡಿಸಬೇಕಾದರೆ ಇನ್ನು ೭೦ ಪುಟಗಳನ್ನು ಬರೆದರೂ ಸಾಲದು; ಅಲ್ಲದೆ ನನ್ನ ಲೇಖನದಲ್ಲಿ ಹೇಳಿರುವ ಅನೇಕ ವಿಷಯಗಳನ್ನು ನಾನು ಈ ಸಂದರ್ಭದಲ್ಲಿ ಪುನಃ ಹೇಳಬೇಕಾಗುವುದು. ಆದ್ದರಿಂದ ಉಕ್ತ ಅವತರಣಿಕೆಯಲ್ಲಿ ಮ॥ ಆಚಾರ್ಯರು ಕೊಟ್ಟಿರುವ ಸಮಾಧಾನಗಳನ್ನೂ ಮತ್ತು ನನ್ನ ಲೇಖನದ ಮೇಲೆ ಮಾಡಿರುವ ಆಕ್ಷೇಪಗಳನ್ನೂ ಓದುವಾಗ ವಾಚಕರು ನನ್ನ ಲೇಖನದಲ್ಲಿ ನಾನು ಹೇಳಿರುವುದನ್ನೂ ಆ ಸಮಯ ದಲ್ಲಿಯೇ ಓದಿ ನಮ್ಮಿಬ್ಬರಲ್ಲಿ ಯಾರ ಪಕ್ಷವು ಸಾಧೀಯಸ್ಸಾಗಿದೆ ಯೆಂಬುದನ್ನು ನಿರ್ಣಯಿಸಿಕೊಳ್ಳಬೇಕೆಂದು ನಾನು ಅವರನ್ನು ಪ್ರಾರ್ಥಿಸಿ ಈ ಪ್ರತ್ಯುಕ್ತಿಯನ್ನು ಇಲ್ಲಿಗೆ ಮುಗಿಸುತ್ತೇನೆ.

---

ಸಂಖ್ಯೆಯಿಂದ ನಿರ್ಣೀತವಾಗಬೇಕೆಂಬ ನಿಯಮವೇನೂ ಇಲ್ಲ' ಎಂದೂ (ಪುಟ LXXV), 'ಕವಿಕಂಠೋಕ್ತವಾಗಿ ಆ ಬಸ್ತಿ ಪೆಣ್ಣೆಂಗಡಲಲ್ಲಿದ್ದಿತು ಎಂದು ಹೇಳಿರುವಾಗ ಅದು ಮತ್ತೊಂದು ಕಡೆ ಇದ್ದಿತು ಎಂದು ಕಲ್ಪಿಸುವುದಕ್ಕೆ ನಾವಾರು?....ಕವಿ ಹೇಳಿರುವಂತೆ ಪೆಣ್ಣೆಂಗಡಲಲ್ಲಿ ತ್ರಿಭುವನ ತಿಲಕ ಎಂಬ ಬಸ್ತಿ ಏಕಿರಕೂಡದು?' ಎಂದೂ (ಪುಟ LXXVI), 'ಹರಿವಂಶವನ್ನು ೭೮೩ರಲ್ಲಿ ಬರೆದ ಜಿನಸೇನನೂ ಮಹಾಪುರಾಣವನ್ನು ಸು. ೮೩೮ರಲ್ಲಿ ಬರೆದ ಜಿನಸೇನನೂ ಒಬ್ಬನೇ ಎಂದು ಅಯ್ಯನವರು ಭ್ರಮಿಸಿದ್ದಾರೆ' ಎಂದೂ (ಪುಟ LXXVII), 'ಈ ಹೇಳಿಕೆಗೆ ಈ ಶಾಸನವನ್ನು ಪರಿಶೀಲಿಸದೆ ಹೋದುದೇ ಮೂಲವು. ಈ ಶಾಸನದ ೯೬ನೆಯ ಪಙ್ಕ್ತಿಯಲ್ಲಿ ದೇವಚಂದ್ರನ ಸಧರ್ಮ ಮಾಘನಂದಿ ಎಂದು ಹೇಳಿ ವಾಕ್ಯವು ಮುಗಿಯುತ್ತದೆ. ಮುಂದಣ ೯೭–೧೦೦ ಪಙ್ಕ್ತಿಗಳಲ್ಲಿ ದೇವಕೀರ್ತಿಯ ಶಿಷ್ಯರು ಉಕ್ತರಾಗಿದ್ದಾರೆ. ಇವರಿಗೂ ದೇವಚಂದ್ರನಿಗೂ ಆವ ಸಂಬಂಧವೂ ಇಲ್ಲ' ಎಂದೂ (ಪುಟ LXXII), ಮ॥ ಆಚಾರ್ಯರು ಮಾಡಿರುವ ಈ ವಿಧವಾದ ಕೆಲವು ಆಕ್ಷೇಪಗಳು ನ್ಯಾಯ್ಯವಾಗಿರುವುವು. ಈ ಆಕ್ಷೇಪಗಳೆಲ್ಲಾ ಮುಖ್ಯವಲ್ಲದ ವಿಷಯಗಳಿಗೆ ಸಂಬಂಧಿಸಿ ಕೊಂಡಿರುವುದರಿಂದ ನಾನು ನಾಗಚಂದ್ರಾದಿ ಕವಿಗಳಿಗೆ ಹೇಳಿರುವ ಕಾಲವು ತಪ್ಪೆಂಬುದನ್ನು ನಿರ್ಣಯಿಸುವುದಕ್ಕೆ ಅವು ಸ್ವಲ್ಪವೂ ಸಹಕಾರಿಗಳಾಗುವುದಿಲ್ಲ.

---

1861-30—ಬೆಂಗಳೂರು ಪ್ರೆಸ್, ಮೈಸೂರು ರೋಡು, ಬೆಂಗಳೂರು ಸಿಟಿ.